# ಬಳ್ಳಾರಿ ಜಿಲ್ಲೆ ಬೇಡ ಸಮುದಾಯದ ಶಿಕ್ಷಣದ ಪ್ರಗತಿ

## ಒಂದು ಅಧ್ಯಯನ

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)


ಸಂಶೋಧಕ

**ಮಲ್ಲಿಕಾರ್ಜುನ ಕಿಚಿಡಿ**

ಮಾರ್ಗದರ್ಶಕರು

**ಡಾ. ಕೇಶವನ್ ಪ್ರಸಾದ್ ಕೆ.**

ಪ್ರವಾಚಕರು

ಬುಡಕಟ್ಟು ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬





ಬುಡಕಟ್ಟು ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೩

# ಬಳ್ಳಾರಿ ಜಿಲ್ಲೆ ಬೇಡ ಸಮುದಾಯದ ಶಿಕ್ಷಣದ ಪ್ರಗತಿ

## ಒಂದು ಅಧ್ಯಯನ

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)


**ಸಂಶೋಧಕ**

**ಮಲ್ಲಿಕಾರ್ಜುನ ಕಿಚಿಡಿ**





ಮಾರ್ಗದರ್ಶಕರು

**ಡಾ. ಕೇಶವನ್ ಪ್ರಸಾದ್ ಕೆ.**

ಪ್ರವಾಚಕರು

ಬುಡಕಟ್ಟು ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬





**ಬುಡಕಟ್ಟು ಅಧ್ಯಯನ ವಿಭಾಗ**

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೩

# ಪ್ರಮಾಣ ಪತ್ರ

**"ಬಳ್ಳಾರಿ ಜಿಲ್ಲೆ ಬೇಡ ಸಮುದಾಯದ ಶಿಕ್ಷಣದ ಪ್ರಗತಿ : ಒಂದು ಅಧ್ಯಯನ" (ಜಿಲ್ಲಾ ಪ್ರಾಥಮಿಕ ಶಿಕ್ಷಣ ಯೋಜನೆ ಅಡಿಯಲ್ಲಿ)** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಡಾ.ಕೇಶವನ್ ಪ್ರಸಾದ್ ಕೆ. ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಈ ಮಹಾಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು, ಈ ಮೊದಲು ಯಾವುದೇ ಪದವಿ ಅಥವಾ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ
ದಿನಾಂಕ : ೦೫ - ೦೪ - ೨೦೦೪

**ಮಲ್ಲಿಕಾರ್ಜುನ. ಕಿಚಿಡಿ**
ಸಂಶೋಧಕ
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

# ದೃಢೀಕರಣ ಪತ್ರ

ಶ್ರೀ ಮಲ್ಲಿಕಾರ್ಜುನ. ಕಿಚಿಡಿ ಇವರು **"ಬಳ್ಳಾರಿ ಜಿಲ್ಲೆ ಬೇಡ ಸಮುದಾಯದ ಶಿಕ್ಷಣದ ಪ್ರಗತಿ : ಒಂದು ಅಧ್ಯಯನ" (ಜಿಲ್ಲಾ ಪ್ರಾಥಮಿಕ ಶಿಕ್ಷಣ ಯೋಜನೆ ಅಡಿಯಲ್ಲಿ)** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ ಪದವಿಗಾಗಿ ಈ ಮಹಾಪ್ರಬಂಧವನ್ನು ಸಲ್ಲಿಸಲಾಗುತ್ತಿದೆ. ಇದರ ಯಾವುದೇ ಭಾಗವನ್ನು ಈ ಮೊದಲು ಪದವಿಗಾಗಿ ಅಥವಾ ಇತರ ಉದ್ದೇಶಗಳಿಗಾಗಿ ಬಳಸಿಕೊಂಡಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ : ೦೫ - ೦೪ - ೨೦೦೪

**(ಡಾ. ಕೇಶವನ್ ಪ್ರಸಾದ್ ಕೆ.)**

ಪ್ರವಾಚಕರು ಹಾಗೂ ಮಾರ್ಗದರ್ಶಕರು

ಬುಡಕಟ್ಟು ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩ ೨೭೬

# ಪರಿವಿಡಿ

## ಸಂಕ್ಷಿಪ್ತ ಪದಗಳ ವಿವರಣೆ

| | | | |
|---|---|---|---|
| 1. | BRC | - | Block Resource Committee. |
| 2. | CRC | - | Cluster Resource Committee. |
| 3. | DSERT | - | Directarate of State Educational Research and Training. |
| 4. | MLL | - | Minimum Levels of Learning. |
| 5. | NCERT | - | National Council for Educational Research and Training. |
| 6. | NFE | - | Non-Formal Education. |
| 7. | NGO | - | Non Governmental Organisation. |
| 8. | RIE | - | Regional Institute of Education. |
| 9. | SCERT | - | State Council for Educational Research and Training. |
| 10. | SDMC | - | School Development and Management Committee. |
| 11. | UNICEF | - | United Nations International Children Educational Fund. |
| 12. | VC | - | Village Committee. |

# ಅಧ್ಯಾಯ - ೧

# ಪ್ರಸ್ತಾವನೆ

# ಪ್ರಸ್ತಾವನೆ

## ೧. ೧. ಪೀಠಿಕೆ

ಮಾನವನು ಆದಿಕಾಲದಿಂದಲೂ ತನ್ನ ಸರ್ವತೋಮುಖ ಬೆಳವಣಿಗೆಗಾಗಿ ಅನೇಕ ಏಳು ಬೀಳುಗಳನ್ನು ಕಂಡು ಕೊಂಡಿದ್ದಾನೆ. ತನ್ನ ಅಭಿವೃದ್ಧಿಯ ಉನ್ನತಿಯನ್ನು ಕಾಣಲು ಕಲಿಕೆ ಎನ್ನುವುದನ್ನು ಬುನಾದಿಯನ್ನಾಗಿ ಮಾಡಿಕೊಂಡನು. ಈ ಕಲಿಕೆ ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗಿದ್ದರೂ ಕಾಲಕ್ರಮೇಣ ಸಾಮೂಹಿಕವಾಯಿತು. ಇದನ್ನು ಶಿಕ್ಷಣವೆಂದು ರೂಢಿಮಾಡಿಕೊಂಡನು.

## ಶಿಕ್ಷಣದ ವ್ಯಾಖ್ಯಾನಗಳು

ವ್ಯಕ್ತಿಯ ಅಭಿವೃದ್ಧಿ ಹಾಗೂ ಬೆಳವಣಿಗೆಗೆ ಶಿಕ್ಷಣವೇ ಅಡಿಪಾಯ. ಈ ಅಂಶಗಳನ್ನು ಪುಷ್ಟೀಕರಿಸಲು ಶಿಕ್ಷಣದ ವಿದ್ವಾಂಸರು ಈ ಕೆಳಗಿನ ವ್ಯಾಖ್ಯಾನಗಳನ್ನು ನೀಡಿದ್ದಾರೆ.

**ಸ್ವಾಮಿ ವಿವೇಕಾನಂದರು :** "ವಿದ್ಯೆ ಎಂದರೆ ಮೆದುಳಿನಲ್ಲಿ ಬರಿ ಮಾಹಿತಿ ತುರುಕುವುದಲ್ಲ, ಅಲ್ಲಿ ಜೀರ್ಣ ವಾಗುವುದಕ್ಕೆ ಅಯುಷ್ಯವಿಡೀ ಗೊಂದಲವೆಬ್ಬಿಸುವ ಒಣ ಜ್ಞಾನವಲ್ಲ. ವಿದ್ಯೆಯಿಂದಾಗಿ ಉಚ್ಚ ವಿಚಾರಗಳು ರಕ್ತಗತವಾಗಬೇಕು, ಜೀವನದಲ್ಲಿ ಚೈತನ್ಯ ಮೂಡುವಂತಾಗಬೇಕು, ಪೌರುಷ ಕೆರಳುವಂತಾಗಬೇಕು, ಶೀಲ ಮೈ ತುಂಬು ವಂತಾಗಬೇಕು" ಎಂದಿದ್ದಾರೆ.[೧]

**ಡಾ.ಸ.ರಾಧಾಕೃಷ್ಣನ್ :** "ಮಕ್ಕಳು ಮಾನವರಾಗಿ, ನಾಗರಿಕರಾಗಿ ಇನ್ನೊಬ್ಬರೊಡನೆ ಮೈತ್ರಿ, ಗೌರವ, ಘನತೆಗಳಿಂದ ವರ್ತಿಸುವಂತೆ ಮಾಡಿ ಮಕ್ಕಳಲ್ಲಿ ಔದಾರ್ಯ, ಸಹೋದರ ಭಾವನೆ, ಸಹಾನುಭೂತಿ ಹೆಚ್ಚಾಗುವಂತೆ ಮಾಡುವುದೇ ಶಿಕ್ಷಣ" ಎಂದಿದ್ದಾರೆ.[೧]

**ರಾಸ್ :** "ಸ್ವಾಭಾವಿಕ ಬೆಳವಣಿಗೆಯಲ್ಲಿ ವಿಶಿಷ್ಟವಾದ ವ್ಯತ್ಯಾಸಗಳನ್ನು ಸಾಧಿಸುವುದೇ ಶಿಕ್ಷಣದ ಕಾರ್ಯ. ಈ ಬಗೆಯ ಕ್ರಮಬದ್ಧ ಶಿಕ್ಷಣವಿರದಿದ್ದರೆ ವ್ಯಕ್ತಿಯು ಸತ್ವವನ್ನು ಕಳೆದುಕೊಂಡು ಬೇರೆ ಏನೇನೋ ಆಗಿ ಬಿಡಬಹುದು" ಎಂದಿದ್ದಾರೆ.[೧]

**ಡಮ್‌ವಿಲ್ :** ಮನಃಶಾಸ್ತ್ರಜ್ಞ ಹೇಳುವಂತೆ "ಹುಟ್ಟಿನಿಂದ ಚಟ್ಟದವರೆಗೆ ವ್ಯಕ್ತಿಯ ಜೀವನದ ಮೇಲೆ ಪ್ರಭಾವ ಬೀರುವುದೆಲ್ಲವೂ ಶಿಕ್ಷಣವೆನಿಸುತ್ತದೆ".

**ಗಾಂಧೀಜಿ :** "ಸ್ತ್ರೀ ಪುರುಷರಿಗೆ ಶಿಕ್ಷಣವನ್ನೀಯಲು ಅದೊಂದು ಸಾಧನ ಮಾತ್ರ. ಮಗು/ವ್ಯಕ್ತಿಗಳಲ್ಲಿ ಹುದುಗಿರುವ ಉನ್ನತವಾದ ಅಂಶಗಳನ್ನೆಲ್ಲ ಹೊರ ತೆಗೆಯುವುದೇ ಶಿಕ್ಷಣದ ಕಾರ್ಯವಾಗಿದೆ" ಎಂದಿದ್ದಾರೆ.[೧]

**ರವೀಂದ್ರನಾಥ ಠಾಗೂರ್ :** "ಆತ್ಮ ಪ್ರಕಾಶ ಪ್ರೇಮಿಗಳೆಂಬ ಸ್ಥಿರಸಂಪತ್ತನ್ನು ತಂದುಕೊಟ್ಟು ಮಗುವನ್ನು ಸುಂದರ ಯೋಗ್ಯ ಸತ್ಯವಂತನಾದ ವ್ಯಕ್ತಿಯನ್ನಾಗಿ ಮಾಡುವುದೇ ಶಿಕ್ಷಣ" ಎಂದಿದ್ದಾರೆ.[೧]

**ಸಾಕ್ರೆಟಿಸ್ :** "ಮಗು-ವ್ಯಕ್ತಿಗೆ ಸತ್ವವನ್ನು ತಿಳಿಯಪಡಿಸಿ ಅದರಂತೆ ಅದನ್ನು ವ್ಯವಹಾರದಲ್ಲಿ ತರುವಂತೆ ಕಲಿಸುವುದೇ ಶಿಕ್ಷಣ" ಎಂದು ಹೇಳುತ್ತಾರೆ.[೧]

**ಬರ್ಟ್‌ರ್ಯಾಂಡ್ ರಸಲ್ :** "ವೀರರೂ, ಧೀರರೂ ಸತ್‌ಶೀಲರೂ, ಪ್ರತಿಭಾ ಸಂಪನ್ನರೂ ಆದ ವ್ಯಕ್ತಿಗಳನ್ನೊಳಗೊಂಡ ಸಮಾಜವನ್ನು ನಿರ್ಮಿಸುವುದೇ ಶಿಕ್ಷಣ".[೧]

**ಸ್ಪೆನ್ಸ್‌ರ್ :** "ಜೀವನವನ್ನು ಪರಿಪೂರ್ಣಗೊಳಿಸುವುದೇ ಶಿಕ್ಷಣ".[೧]

**ಯಜ್ಞವಲ್ಕ್ಯ :** "ಮಾನವನಲ್ಲಿ ಸಚ್ಚಾರಿತ್ರ್ಯ ಬೆಳಸಿ ಸಮಾಜ ಜೀವಿಯಾಗುವಂತೆ ಮಾಡುವುದೇ ಶಿಕ್ಷಣ".[೧]

**ಅರವಿಂದ ಘೋಷ್ :** "ನೈತಿಕ ಗುಣಗಳು ಮಗುವಿನಲ್ಲಿ ಬೆಳೆಸಲು ನೆರವಾಗುವುದೇ ಶಿಕ್ಷಣ".[೧]

**ಅರಿಸ್ಟಾಟಲ್ :** "ಮಗುವಿನ ಆರೋಗ್ಯಕರವಾದ ದೇಹದಲ್ಲಿ ಆರೋಗ್ಯಕರವಾದ ಮನಸ್ಸನ್ನು ಸೃಷ್ಟಿಸುವುದೇ ಶಿಕ್ಷಣ".[೧]

**ಜಾನ್‌ಡ್ಯೂಯಿ :** "ಮಗುವಿನ/ವ್ಯಕ್ತಿಯ ಅನುಭವ ಮತ್ತು ಚಟುವಟಿಕೆಗಳನ್ನು ನಿರಂತರವಾಗಿ ಪುನರ್‌ವ್ಯವಸ್ಥೆಗೊಳಿಸುವ ಪ್ರಕ್ರಿಯೆಯೇ ಶಿಕ್ಷಣ" ಎಂದಿದ್ದಾರೆ.[೧]

**ಉಪನಿಷತ್ :** "ಮಾನವನನ್ನು ಮೋಸ, ವಂಚನೆ, ಅಜ್ಞಾನದಿಂದ ಬಿಡುಗಡೆ ಮಾಡಿ ತಿಳುವಳಿಕೆ, ಸತ್ಯ, ನ್ಯಾಯ, ನೀತಿ, ಧೈರ್ಯ ಮೊದಲಾದ ಸದ್ಗುಣಗಳ ಕಡೆ ಕೊಂಡೊಯ್ಯುವುದೇ ಶಿಕ್ಷಣ" ಎಂದಿದೆ.[೧]

Introduction is a basic activity of man kind. "Men inform one another conveying belief Knowledge and skill as they raise a family, earn a living, given a polity, minister a church, nurse the ill, encounter freinds or communicate through mass medium. Encounter friends or communicate through a mass medium". [೨]

Education means : "Systematic training and instruction design to import knowledge and develop skill". [೩]

ಮಾನವನ ಬೆಳವಣಿಗೆಯ ಹಂತದಲ್ಲಿ ಶಿಕ್ಷಣದ ಪಾತ್ರ ಅಪಾರ. ಅದರಲ್ಲಿಯೂ ಪ್ರಾಥಮಿಕ ಶಾಲಾ ಶಿಕ್ಷಣವು ಅತಿ ಪ್ರಮುಖವಾದುದು. ಇಡೀ ರಾಷ್ಟ್ರದ ಏಳ್ಗೆ ಹಾಗೂ ಅಭಿವೃದ್ಧಿಗೆ ವಿದ್ಯಾವಂತರ ಪಾತ್ರ ಮಹತ್ವವಾಗಿದೆ. ಆದ್ದರಿಂದ ಪ್ರತಿಯೊಬ್ಬ ವ್ಯಕ್ತಿಯು ಶಿಕ್ಷಣ ಪಡೆಯುವಂತಾಗಬೇಕು ಎಂಬ ಉದ್ದೇಶದಿಂದ ಭಾರತ ಸರಕಾರವು ಹತ್ತು ಹಲವಾರು ಯೋಜನೆಗಳನ್ನು ಹಮ್ಮಿಕೊಂಡಿದೆ. ಅವುಗಳಲ್ಲಿ **'೧೯೮೬ರ ಶಿಕ್ಷಣದ ಮೇಲಿನ ರಾಷ್ಟ್ರೀಯ ಯೋಜನೆ'** ಹಾಗೂ **'೧೯೯೨ರ ಪರಿಷ್ಕೃತ ಶಿಕ್ಷಣದ ಮೇಲಿನ ರಾಷ್ಟ್ರೀಯ ಯೋಜನೆ'**ಗಳು ಪ್ರಮುಖವಾದವು.

ಪ್ರಾಥಮಿಕ ಶಿಕ್ಷಣವು ಕಲಿಕೆಯ ಮೊದಲ ಹಂತ. ಈ ಹಂತದಲ್ಲಿ ದಾಖಲಾತಿ ಹಾಗೂ ಕಲಿಕೆಯಲ್ಲಿ ಅನೇಕ ವ್ಯತ್ಯಾಸಗಳಿವೆ. ಅಂದರೆ, ಮಕ್ಕಳು ಗ್ರಹಿಸುವ ಶಕ್ತಿ, ಅರ್ಥಮಾಡಿಕೊಳ್ಳುವಿಕೆ ವಿಭಿನ್ನವಾಗಿರುತ್ತದೆ. ಇದಕ್ಕೆ ಕಾರಣ ಇಲ್ಲದಿಲ್ಲ. ಇದಕ್ಕೆ ಪ್ರತಿ ವಿದ್ಯಾರ್ಥಿಯ ಸಾಮಾಜಿಕ ಹಾಗೂ ಆರ್ಥಿಕ ಹಿನ್ನೆಲೆಯು ಪ್ರಮುಖ ಪಾತ್ರವಹಿಸುತ್ತದೆ.

## ೧. ೨. ಬೇಡ ಸಮುದಾಯದ ಉಗಮ ಮತ್ತು ವಿಕಾಸ

ಭಾರತೀಯ ಸಂವಿಧಾನದ ೧೫ನೇಯ ಅನುಚ್ಛೇಧದ ಪ್ರಕಾರ "ಧರ್ಮ, ಜನಾಂಗ, ಜಾತಿ, ಲಿಂಗ ಅಥವಾ ಜನ್ಮಸ್ಥಳಗಳ ಆಧಾರದ ಮೇಲೆ ಪಕ್ಷಪಾತ ಮಾಡುವುದನ್ನು ನಿಷೇಧಿಸಿದೆ."[೪] ಈ ಅನುಚ್ಛೇಧದ ಅನ್ವಯ ಅನೇಕ ಬುಡಕಟ್ಟುಗಳು ಅಭಿವೃದ್ಧಿಯ ಪ್ರಗತಿಯಿಂದ ಬೆಳಕಿಗೆ ಬಂದವು. ಅವುಗಳಲ್ಲಿ ಅಧ್ಯಯನಕ್ಕೆ ಒಳಪಟ್ಟ ಬೇಡ ಸಮುದಾಯವೂ ಒಂದು.

ಬುಡಕಟ್ಟು ಸಮುದಾಯಗಳ ಅಧ್ಯಯನ ನಮ್ಮ ಸಂಸ್ಕೃತಿಯ ತಿಳುವಳಿಕೆಗೆ ಸಮಾಜದ ಬಗೆಗಿನ ಒಳನೋಟಗಳಿಗೆ ಹೊಸ ಆಯಾಮಗಳನ್ನು ಒದಗಿಸುತ್ತದೆ. ಇಂತಹ ಸಾಂಸ್ಕೃತಿಕ, ಸಾಮಾಜಿಕ ಅಧ್ಯಯನ ಬ್ರಿಟಿಷರು ಭಾರತವನ್ನು ಆಳುತ್ತಿದ್ದ ಕಾಲದಿಂದಲೇ ನಡೆದುಬಂದಿದೆ. ಅನೇಕ ವಿದೇಶಿ ವಿದ್ವಾಂಸರು ಗಣನೀಯ ಸೇವೆ ಸಲ್ಲಿಸಿದ್ದಾರೆ. ವೆರಿಯರ್

ಎಲ್ವಿನ್‌ರಂತಹ ವಿದ್ವಾಂಸರು ಭಾರತದ ಅನೇಕ ಬುಡಕಟ್ಟುಗಳ ಬಗ್ಗೆ ಸಂಶೋಧನೆ ಕೈಗೊಂಡು ಅದರ ಉದ್ಧಾರಕ್ಕಾಗಿ ತಮ್ಮ ಬದುಕನ್ನೇ ಅರ್ಪಿಸಿಕೊಂಡಿದ್ದಾರೆ.

ಕರ್ನಾಟಕದಲ್ಲಿ ಪ್ರಧಾನ ಬುಡಕಟ್ಟುಗಳಾದ ಮ್ಯಾಸಬೇಡರು ಮತ್ತು ಕಾಡುಗೊಲ್ಲರನ್ನು ಕುರಿತು ಸಾಕಷ್ಟು ಅಧ್ಯಯನಗಳು ನಡೆದಿವೆ. ಇ.ಥರ್ಸ್ಟನ್, ಎಲ್.ಕೆ.ಅನಂತಕೃಷ್ಣ ಅಯ್ಯರ್ ಮತ್ತು ಹೆಚ್.ವಿ.ನಂಜುಂಡಯ್ಯ ಡಾ.ತಿ.ನಂ. ಶಂಕರನಾರಾಯಣ, ಡಾ. ಕಾಳೇಗೌಡ ನಾಗವಾರ ಇನ್ನಿತರರು ನಡೆಸಿರುವ ಅಧ್ಯಯನಗಳಲ್ಲಿ ಬೇಡ ಸಮುದಾಯದ ಉಗಮ ಮತ್ತು ವಿಕಾಸದ ಬಗ್ಗೆ ಸಂಕ್ಷಿಪ್ತವಾಗಿ ವಿವರಣೆ ನೀಡಲಾಗಿದೆ.

ಆದಿ ಮೂಲವಾದ ಭಗವಂತನು ಬೇಡರ ಚಂಚುಲಕ್ಷ್ಮಿಯನ್ನು ಮದುವೆಯಾಗುವ ಮೂಲಕ ಬೇಡರ ವಂಶವನ್ನು ಬೆಳೆಸಿದನೆಂಬ ಪುರಾಣ ಕಥೆಯೊಂದು ನಮ್ಮಲ್ಲಿ ಇಂದಿಗೂ ಪ್ರಚಲಿತವಿದೆ. ಅದರಂತೆ, ಮನುವಿನ ಏಳನೆಯ ತಲೆಯವನಾಗಿ ಚಂದ್ರವಂಶದಲ್ಲಿ ಕಾರ್ತ್ಯವಿರ್ಯಾರ್ಜುನ ಹುಟ್ಟಿದನು. ಈತ ರಾಜ್ಯವನ್ನು ಆಳುತ್ತಿರುವಾಗ ವೈಷ್ಣವ ಯಾಗಾದಿಗಳನ್ನು ಮಾಡುತ್ತಿದ್ದನು. ಇದೇ ಸಂದರ್ಭದಲ್ಲಿ ಜಮದಗ್ನಿ ಈತನಿಂದ ಹತನಾದ. ಇದರಿಂದ ಕುಪಿತನಾದ ಪರಶುರಾಮ ಕಾರ್ತ್ಯವೀರ್ಯಾರ್ಜುನ ಹಾಗೂ ಅವನ ಮಕ್ಕಳನ್ನು ಕೊಂದು ಕ್ಷತ್ರಿಯರೆಲ್ಲರನ್ನು ಸದೆಬಡಿಯಲು ೨೧ ಭಾರಿ ಭೂಮಿ ಮೇಲೆ ದಂಡಯಾತ್ರೆ ಕೈಗೊಂಡನು. ಆಗ ಬೆದರಿದ ಕ್ಷತ್ರಿಯರೆಲ್ಲ ಕಾಡಿಗೆ ಓಡಿ ಹೋದರು ಹಾಗೂ ಅಲ್ಲಿಯೇ ಕಾಡುವಾಸಿಗಳಾದರು. ಇವರೇ ಮುಂದೆ ಬೇಡರಾದರೆಂದು ತಿಳಿದು ಬರುತ್ತದೆ.

ದಕ್ಷಿಣದ ಪೈನ ಗಂಗಾತೀರದ ಸುತ್ತಿನ ಪ್ರದೇಶ ಬೇಡರ ರಾಜ್ಯವಾಗಿತ್ತೆಂದು ಹೇಳುವ ಮೂಲಕ ಮಹಾಭಾರತ ಕಾಲೀನ ಬೇಡರ ರಾಜ್ಯ ಮತ್ತು ಅವರ ಅಸ್ತಿತ್ವವನ್ನು ಗುರುತಿಸಲಾಗಿದೆ. ಕಲಿಯುಗದ ಆರಂಭಕ್ಕೆ ದಕ್ಷಿಣ ದೇಶದಲ್ಲಿ ಬೇಡರ ವಿನಃ ಬೇರೆ ಯಾವ ಸಮುದಾಯವು ಇರಲಿಲ್ಲ. ಅನಂತರ ಉದಯಿಸಿದ ಮನೆತನಗಳಿಗೆಲ್ಲಾ ಬೇಡರೇ ಮೂಲರೆಂದು ಪ್ರತಿಪಾದಿಸುವ ಅನೇಕ ಊಹೆಯ ವಾದಗಳಿವೆ.

ಬೇಡ ಸಮುದಾಯವು ಮೂಲ ದ್ರಾವಿಡರೆಂಬ ವಾದದಲ್ಲಿ ಎರಡಿಲ್ಲ. ಆಗಿನ ಪುಳಿಂದ, ಭಿಲ್ಲ, ಕಿರಾತ, ಶಿಬಿರ, ನಿಷಾದ ಮುಂತಾದ ಪುರಾತನ ಹೆಸರುಗಳೇ ಇದಕ್ಕೆ ಸಾಕ್ಷಿ. ಅಂತೆಯೇ ದ್ರಾವಿಡ ಭಾಷೆಯಲ್ಲಿ ವೇಡನ್, ವೇಂದನ್, ವೆಟ್ಟುವನ್ ಎಂದೆಲ್ಲ ಕರೆಯಲಾಗಿದೆ. ಹಳೆಗನ್ನಡದಲ್ಲಿ ವೇಡರ್, ವೇಳರ್, ವಿದಿರ್, ಬಿಲ್ಲ, ಬೆಂಟೆಯವರ್, ಬೇಂಟೆಕಾರ, ವಿಯದರ್, ಬಿಯದರ್, ಕುಣಿಂದರ್, ಕೋವರ್ ಎಂಬ ನಾಮಗಳಿವೆ ರಾಷ್ಟ್ರಕೂಟರ ಅಪಭ್ರಂಶ ಭಾಷೆಯಲ್ಲಿ ನಾಹಲ,

ನಾಹಿಲ, ನಾ ಇಲ್ಲ, ವಾಹ, ಸಮುರ, ಸಿಮಿರ, ಬೆಲಾಡ, ಬಾದ್ದಿಯ ಮುಂತಾಗಿ ಗುರುತಿಸಲಾಗಿದೆ. ಇವೆಲ್ಲ ಪದಗಳು ಬೇಡ ಸಮುದಾಯದ ಪ್ರಾಚೀನತೆಯ ವ್ಯಾಪ್ತಿಯನ್ನು ಸ್ಪಷ್ಟೀಕರಿಸುತ್ತವೆ.

ಮೂಲತಃ ವಾಲ್ಮೀಕಿ ಬೇಡ ಸಮುದಾಯದವನೆಂಬ ಅಭಿಪ್ರಾಯವಿದೆ. ಕಿರಾತರ ಯಜಮಾನನಾದ ಈತ ಕಾಮಕೇತು, ಲಕ್ಷ, ಮೀನು, ಮಲ್ಲರೆಂಬ ಇನ್ನಿತರ ಏಳು ಜನ ಮಕ್ಕಳ ನೇತೃತ್ವದಲ್ಲಿ ಏಳು ಪಡೆಗಳನ್ನು ರಚಿಸಿ ದರೋಡೆ ನಡೆಸುತ್ತಿದ್ದನು. ಮುಂದೆ ಕಾಡಿನಲ್ಲಿ ಕಾಲಾನಂತರ ಚದುರಿಹೋದ ಈ ಪಡೆಗಳು ಬೇಡ ಸಮುದಾಯದ ವಂಶ ವಿಕಾಸಕ್ಕೆ ನಾಂದಿಯಾಯಿತು ಎಂಬ ಐತಿಹ್ಯವಿದೆ. ಅದೇನೇ ಇದ್ದರೂ ತೂರಿಹೋದ ಇಂಥ ಬೇಡ ಪಡೆಯ ತುಕುಡಿಗಳು ಆಯಾ ಪ್ರದೇಶಗಳಲ್ಲಿ ಗಟ್ಟಿಯಾಗಿ ನೆಲೆಯೂರಿದವು ಎಂಬುದರಲ್ಲಿ ಸಂಶಯವಿಲ್ಲ. ಅವರೀಗ ಅಲ್ಲಿಯ ಹೆಸರುಗಳಿಂದಲೇ ಇಂದು ದೇಶಾದ್ಯಂತ ಗುರುತಿಸಲ್ಪಡುತ್ತಿದ್ದಾರೆ ಎಂಬುದು ಬಹು ಮಹತ್ವಪೂರ್ಣವಾದ ಅಂಶವಾಗಿದೆ. ಅದರ ಒಂದು ಪಟ್ಟಿಯನ್ನು ಈ ರೀತಿ ನೋಡಬಹುದು.

**ಪ್ರದೇಶ ಹಾಗೂ ಬೇಡರ ಪರ್ಯಾಯ ಪದಗಳು**

| ರಾಜ್ಯ/ಪ್ರದೇಶ | | ಪರ್ಯಾಯ ಹೆಸರುಗಳು |
|---|---|---|
| ತಮಿಳುನಾಡು | : | ನಾಯಾಕ್ಷಾ, ನಾಯಕ, ನಾಯಕರ್, ವಾಲ್ಮೀಕಿ, ವೇಡನ್, ವೆತ್ತಲೆ, ನಾಯಕರ್, ವೇತುಕನ್, ಗೆಂಟು. |
| ಸಿಲೋನ್ | : | ವೇಟನ್ ವೇಡುವಾಸ, ವೆದ್ದಾನ್, ವೇಟೆಕಾರನ್ |
| ಉತ್ತರ ಪ್ರದೇಶ | : | ಜಾಟ್ |
| ಪಂಜಾಬ್ | : | ಭೀಲ್, ಬಾಲಮೀಕಿ, ವಾಲ್ಮೀಕಿ, ನಾಯಕಮಾಂಗ್ |
| ಬಂಗಾಲ | : | ಬಿಹಾರ ಸೇನ್ |
| ಕೇರಳ/ಮಲೆಶಿಯಾ | : | ನಾಯರ್ |
| ಕಾಶ್ಮೀರ | : | ಡೋಗ್ರ |

| | | |
|---|---|---|
| ಮಹಾರಾಷ್ಟ್ರ | : | ರಾಮೋಶಿ, ರಾಣವಾಸಿ |
| ಆಂಧ್ರಪ್ರದೇಶ | : | ಭೋವಿ, ಬೋಯ, ನಾಯನಿ, ದೊರೆಬಿಡ್ಡಲು, ಬೊಯಾಸು. |

ಹೀಗೆ ವ್ಯಕ್ತಪಡಿಸಿರುವ ಹಲವು ಪ್ರದೇಶದಲ್ಲಿಯ ಬೇಡರ ಪದಗಳು ವೃತ್ತಿಗನುಸಾರವಾಗಿ ರೂಢಿಗೆ ಬಂದಿವೆ ಎಂಬುದನ್ನು ಗಮನಿಸಬೇಕು. ಇಲ್ಲಿಯ ಕೆಲವು ಹೆಸರುಗಳು ಬೇರೊಂದು ಜಾತಿಯನ್ನು ಸೂಚಿಸುತ್ತವೆ ಎಂಬುದನ್ನು ಸಹ ನಾವು ಮರೆಯುವಂತಿಲ್ಲ. ಆದರೂ ಮೂಲದಲ್ಲಿ ಇವೆಲ್ಲ ಒಂದೇ ಮೂಲದ ಸಮುದಾಯವಾಗಿದ್ದವು ಎಂಬುದರಲ್ಲಿ ಸತ್ಯಾಂಶವಿದೆ.

"ಕರ್ನಾಟಕದ ವಿವಿಧ ಪ್ರದೇಶದಲ್ಲಿ ಬೇಡ, ಬ್ಯಾಡ, ಬ್ಯಾಡರ ಕನ್ನಯ್ಯ, ರಾಮೋಶಿ, ಬೈಡರ್ ನಾಯಕ ಮಕ್ಕಳು, ವಾಲ್ಮೀಕಿ, ತಳವಾರ, ಪಾಳೆಯಗಾರ"[೫] ಎಂಬ ವಿಭಿನ್ನ ಹೆಸರು ಬೇಡರಲ್ಲಿ ಬಳಕೆಯಾಗುತ್ತಿವೆ. ರಾಜಸ್ಥಾನದಲ್ಲಿಯೂ ಸಹ ಅವರು ಮಾಡುತ್ತಿರುವ ಕಸುಬನ್ನೇ ಆಧಾರವಾಗಿಟ್ಟುಕೊಂಡು ವೇಟೆಗಾರನ್, ಬಿಲ್ ನಾಯ್ಕರ್, ಕಾಟ್ಟುನಾಯಕರ್, ವೆತ್ತಲೆನಾಯ್ಕರ್ ವೇಟುವನ್, ತೋಟಿಯನಾಯ್ಕರಣ ಎಂಬಿತ್ಯಾದಿ ಹೆಸರನ್ನು ಶೋಧಿಸಲಾಗಿದೆ. ಕರ್ನಾಟಕದ ಕೆಲ ಭಾಗದಲ್ಲಿ ನಾಯಕ, ನಾಯಕ ಮಕ್ಕಳು, ಅರಮನೆಯ ರಾಜಪರಿವಾರ, ಬೇಡರು, ಬೋಯಿಳು ಪರಿವಾರದವರು ಇವರೆಲ್ಲ ಬೇಡರೆಂದೇ ಗುರುತಿಸಲಾಗುತ್ತಿದೆ. ಬೇಡರಲ್ಲಿ ೩೦ ಉಪ ವಿಭಾಗಗಳಿರುವುದರಿಂದ ಇವರಲ್ಲಿ ಮೇಲ್ನೋಟಕ್ಕೆ ಭಿನ್ನತೆ ಕಾಣಬಹುದು. ಆದರೆ ಮೂಲ ಮಾತ್ರ ಒಂದೆ. ಪಾಳೆಗಾರ, ಮ್ಯಾಸನಾಯಕ, ಬಾರಿಕ್, ಕನ್ನಯ್ಯ ಜಾತಿ, ಕಿರಾತಕ ಜಾತಿ ಎಂದು ಕರ್ನಾಟಕದ ಗಡಿಭಾಗಗಳಲ್ಲಿ ಬಳಕೆಯಲ್ಲಿದೆ. ಇದರಲ್ಲಿ ಬೇಡರ, ವೇರನ್ ಬಾರಕ್, ದೊರೆಬಿಡ್ಡನಾಯಕ, ನಾಯಕವಾಡಿ ಎಂಬ ಇನ್ನಿತರ ಉಪನಾಮಗಳು ಸಹ ಪ್ರಚಲಿತದಲ್ಲಿವೆ.

ಬೇಡರು ಪಂಜಾಬಿನ ಗಿರಿಶಿಖರಗಳಿಂದ ಕರ್ನಾಟಕದೆಡೆ ಬಂದರೆಂದು, ಇವರಿಗೆ ಬಿಲ್ಲರು, ನಾಯಕರು, ಬೇರಾರ್ ಎಂದು ಕರೆಯುತ್ತಿದ್ದರೆಂದು ಕೆಲವು ವಿದ್ವಾಂಸರ ಅಭಿಪ್ರಾಯವಾಗಿದೆ. ಅದರಂತೆ, ಮಧ್ಯ ಪ್ರದೇಶದಲ್ಲಿರುವ ನಾಯಕರು ಮತ್ತು ಮುಂಬೈ, ಸಿಂಧೂಪ್ರದೇಶ, ಗುಜರಾತ್, ಮಹಾರಾಷ್ಟ್ರಗಳಲ್ಲಿರುವ ರಾಮೋಶಿಗಳು ಹಾಗೂ ಡೆಕ್ಕನ್ ಭೂಮಿ, ಉತ್ತರ ಇಂಡಿಯಾದಲ್ಲಿರುವ ವಾಲ್ಮೀಕಿ ನಾಯಕರು ಒಂದೇ ಆಗಿದ್ದರೆಂಬುದು ಹಲವರ ಅಭಿಪ್ರಾಯ.

ಬೇಡರಲ್ಲಿ ಕವಲೊಡೆದ ಅನೇಕ ಪಂಗಡಗಳು ಮುಂದೆ ಪ್ರಭಾವಪೂರ್ಣವಾಗಿ ಬೆಳೆದವು. ಇವು ಬೇಡರ ವಿಕಾಸದ ಪ್ರಮುಖ ಘಟ್ಟವೆಂದೇ ಗುರುತಿಸಬೇಕಾಗುತ್ತದೆ. ಅವುಗಳಲ್ಲಿ ವಾಲ್ಮೀಕಿ, ತಳವಾರ, ಪರಿವಾರ ಮುಂತಾದವು

ಮುಖ್ಯವಾದವು. ವಾಲ್ಮೀಕಿ ತ್ರೇತಾಯುಗದ ಮೂಲ ಸಂವೇದನೆಯನ್ನು ಬದುಕಿನ ಮೌಲ್ಯವನ್ನು, ಸೋಲು ಗೆಲುವು ಗಳನ್ನೆಲ್ಲಾ ಒಟ್ಟಾಗಿ ಹಿಡಿದಿಟ್ಟ ದಾರ್ಶನಿಕ ಶಕ್ತಿ ವಾಲ್ಮೀಕಿಗೆ ದಕ್ಕಿತು ಮತ್ತು ಅದು ರಾಮಾಯಣದ ರೂಪದಲ್ಲಿ ಹೊರಬಿತ್ತು. ಇಂಥ ಶಕ್ತಿ ಸಿಗುವ ಮುನ್ನ ಆದಿಮಾನವನಂತೆ ಅಡವಿಯಲ್ಲಿ ಅಲೆಯುತ್ತಿದ್ದ ವಾಲ್ಮೀಕಿ ಪ್ರಚೇತನ ಮತ್ತು ಪ್ರಮೋಚೆಯರ ಮಗನಾಗಿ ಹುಟ್ಟಿ ತಮಸಾನದಿ ತೀರದಲ್ಲಿ ವಾಸವಾಗಿದ್ದನು. ನಂತರ ಕಿರಾತರ ಯಜಮಾನನಾಗುವ ಮೂಲಕ ಕಾಮಕೇತು, ಮೀನಮಲ್ಲರೆಂಬ ೧೨ ಮಕ್ಕಳಲ್ಲಿ ಏಳು ಮಕ್ಕಳನ್ನು ಆಯ್ಕೆ ಮಾಡಿಕೊಂಡು ವಾಲ್ಮೀಕಿಯು ಅವರ ಮುಖಂಡತ್ವದಲ್ಲೇ ಪಡೆ ರಚಿಸಿ ದರೋಡೆ ನಡೆಸುತ್ತಿದ್ದನೆಂದು ಆತನ ಜೀವನ ಕುರಿತ ಮಾಹಿತಿಯಲ್ಲಿ ತಿಳಿದುಬರುತ್ತದೆ. ಮುಂದೆ ಕಾಡಿನಲ್ಲಿ ಚದುರಿಹೋದ ಈ ಪಡೆಗಳನ್ನೇ ಹಿನ್ನೆಲೆಯಾಗಿಟ್ಟುಕೊಂಡು ಹಲವರು ಬೇಡ ಸಮುದಾಯದ ಮೂಲ ವಾಲ್ಮೀಕಿಯೆಂದು ವಾದಿಸುತ್ತಾರೆ. ಇದರಿಂದ ಬೇಡರ ಒಂದು ಗುಂಪು ತಮ್ಮನ್ನು ವಾಲ್ಮೀಕಿ, ವಾಲ್ಮೀಕಿ ಮಕ್ಕಳೆಂದು ಕರೆಯಿಸಿಕೊಳ್ಳಲು ಇಚ್ಛಿಸುತ್ತಾರೆ. ಮಹಾರಾಷ್ಟ್ರದಲ್ಲಿ ಕಬ್ಬಲಿಗರು ವಾಲ್ಮೀಕಿ ಪೂಜಕರಾಗಿರುವುದರಿಂದ ಅವರಿಗೆ ವಾಲ್ಯಾಲ್ಯಾ (ವಾಲ್ಮೀಕಿ) ಕೋಳಿ ಎನ್ನುತ್ತಾರೆ. ಅದರಂತೆ ತ್ರೇತಾ ಯುಗದಲ್ಲಿದ್ದ ಗುಹ, ಶಬರಿ, ದ್ವಾಪರದಲ್ಲಿದ್ದ ಏಕಲವ್ಯ, ಧರ್ಮವ್ಯಾಧ, ಕಲಿಯುಗದಲ್ಲಿದ್ದ ಬೇಡರ ಕಣ್ಣಪ್ಪರನ್ನು ಬೇಡರು ತಮ್ಮ ಪೂರ್ವಜರೆಂದು ಇಂದಿಗೂ ಆರಾಧಿಸುತ್ತಿರುವುದರ ಅರ್ಥ ಇವರ ವಂಶ ವಿಕಾಸವನ್ನು ಸೂಚಿಸುತ್ತದೆ. ಅಷ್ಟೇ ಅಲ್ಲದೆ ಅವರ ವಂಶದವರೆಂದು ಹೇಳಿಕೊಳ್ಳಲು ಹೆಮ್ಮೆ ಪಡುತ್ತಾರೆ. 'ವಾಲ್ಮೀಕಿ ತನ್ನ ವಂಶದ ಚರಿತ್ರೆಯನ್ನು ರಾಮಾಯಣವಾಗಿಸಿರಬಹುದೆ ಎಂಬ ಬಲವಾದ ಊಹೆಯೊಂದಿದೆ'.

**ತಳವಾರ :** ಬೇಡರಲ್ಲಿಯೇ ಇನ್ನೊಂದು ಹೆಸರು 'ತಳವಾರ', ಯವನರ ವಿರುದ್ಧ ಸದಾ ಖಡ್ಗಧಾರಿಯಾಗಿದ್ದ ಇವರು ವೃತ್ತಿಯಿಂದ ಯುದ್ಧಕ್ಕಾಗಿ ಹೋರಾಡುವ ಸೈನಿಕರಾಗಿದ್ದರು. ಆದುದರಿಂದಲೇ ಇವರಿಗೆ ತಲವಾರ್ (ಖಡ್ಗ) ಎಂಬ ಹೆಸರು ಬಂತೆಂದು ತರ್ಕ. ಆದರೆ ಐತಿಹಾಸಿಕವಾಗಿ ನೋಡುವುದಾದರೆ ಕ್ರಿ.ಶ. ಮೂರನೆಯ ಶತಮಾನಕ್ಕೆ ಸಂಬಂಧಿಸಿದ ನಾಗಾರ್ಜುನಕೊಂಡದ ಇಕ್ಷ್ವಾಕು ವಂಶದ ದೊರೆಗಳಲ್ಲಿ ಸ್ಥಲವರ, ತಲವರ, ತಳವರ, ತಳಾರ, ತಲಾ, ತಳವಾದ, ಮಹಾತಲವಾರ, ನಾಡತಳವಾರ ಎಂಬ ರಕ್ಷಣ ವಿಭಾಗದ ಹುದ್ದೆಗಳಿದ್ದವೆಂದು ತಿಳಿದುಬರುತ್ತದೆ. ಕ್ರಿ.ಶ. ೬ ಮತ್ತು ೮ನೆಯ ಶತಮಾನದ ಶಾಸನಗಳಲ್ಲಿ ತಳಾ, ತಳರ, ಧಲವಾರನೆಂದು ಗುರುತಿಸಲ್ಪಟ್ಟಿದೆ. ವಡ್ಡಾರಾಧನೆಯಲ್ಲೂ ತಳವ, ತಳರ ಎಂಬಿತ್ಯಾದಿ ರೂಪಗಳನ್ನು ಹೇಳಿದೆ. ಇವೆಲ್ಲವೂ ಕಾವಲುಗಾರ, ಗ್ರಾಮರಕ್ಷಕ, ನಾಡನಗರ ಅಧಿಕಾರಿಯೆಂಬ ಅರ್ಥವನ್ನು ಸ್ಫುರಿಸುತ್ತವೆ. ಇಂಥ ಅನೇಕ ತಳವಾರರು ಪಾಳೆಗಾರರಾಗಿ ಕೋಟೆಗಳನ್ನು ಕಟ್ಟಿ ಆಳಿದ ಉದಾಹರಣೆಗಳು

ಉಲ್ಲೇಖಗೊಂಡಿವೆ. ತರುವಾಯ ಸುದ್ದಿ ತಲುಪಿಸುವ, ಪತ್ರ ಒಯ್ಯುವ ಓಲೆಕಾರ ವೃತ್ತಿಗೆ ಸೀಮಿತವಾಗುತ್ತ ಸಾಗಿದೆ. ಈ ತಳವಾರರು 'ಬೇಡ ಸಮುದಾಯ'ದ ಅವಿಭಾಜ್ಯ ಅಂಗವೆನ್ನುವುದು ಮರೆಯಲಾಗದು.

**ನಾಯಕ :** ಬೇಡರ ಗುಂಪಿನಲ್ಲಿ ಶೂರನಾದ ವ್ಯಕ್ತಿ ಪಾಳೆಪಟ್ಟುಗಳನ್ನು ಕಟ್ಟಿಕೊಂಡು ಪಾಳೆಯಗಾರನೆನಿಸಿದ. ಆತನೇ ಮುಂದೆ ಮುಖಂಡನಾದ. ನೇತೃತ್ವ ವಹಿಸಿದ ಈತನಿಗೆ 'ನಾಯಕ'ನೆಂದೇ ಗೌರವ ಸೂಚಕ ಅಭಿದಾನವಿತ್ತು. 'ನಾಯಕ' ಎಂಬ ಪದವು ಕ್ರಿ.ಶ. ೬ನೇಯ ಶತಮಾನದವರೆಗೆ ಕರ್ನಾಟಕದಲ್ಲಿ ಸೇನಾಪತಿ, ಪಡೆದಳ, ಮುಂದಾಳು, ಮುಖ್ಯಸ್ಥನೆಂಬ ಅರ್ಥಗಳಲ್ಲೇ ಬಳಕೆಯಾಗಿದೆ. ಬೇಡರ ಹೆಸರುಗಳು ಕೊನೆಗೆ 'ನಾಯಕ' ಪದ ಬಳಕೆಯಾಗುವ ಪೂರ್ವದಲ್ಲಿ ಬೋವ, ಬೋಯ, ಬೋಯಿ ಎಂದಿದ್ದ ಬಗ್ಗೆ ಹಲವಾರು ದಾಖಲೆಗಳು ಇಂದಿಗೂ ದೃಢೀಕರಿಸುತ್ತವೆ.

**ಮ್ಯಾಸ ನಾಯಕರು :** ಬೇರೆಲ್ಲ ಪಂಗಡಗಳಿಗಿಂತಲೂ ಅತಿ ಹೆಚ್ಚಿನ ಜನಸಂಖ್ಯೆಯನ್ನು ಈ ಪಂಗಡ ಹೊಂದಿದೆ. ಸಹಜವಾಗಿ ಕೃಷ್ಣಕಾಯರಾದ ಈ ಜನರಲ್ಲಿ ಗಿರಿ ಸಮುದಾಯದ ಪ್ರಾಚೀನ ಲಕ್ಷಣ, ಆಚಾರ-ವಿಚಾರಗಳನ್ನು ಕಾಣಬಹುದು. ಇವರಲ್ಲಿ 'ಮಂದಲೋರು, ಮಲ್ಲನಾಯಕನೋರು, ಮಳೆಲೋರು' ಎಂಬ ಆಯಾ ಬೆಡಗುಗಳ ವಿಭೂತಿ ಪುರುಷರ ಹೆಸರಿನಲ್ಲೇ ಗುರುತಿಸಲ್ಪಡುವ ಮೂರು ಪ್ರಧಾನ ಒಳಪಂಗಡಗಳಿವೆ. ಇವರು ಕ್ರಮವಾಗಿ ವಿಷ್ಣು, ಶಿವ, ಬ್ರಹ್ಮನ ಆರಾಧಕರಾಗಿದ್ದಾರೆ. ಆದರೆ ಮಳೆಲೋರು ಮಾತ್ರ ಬ್ರಹ್ಮನೊಂದಿಗೆ ಬೇರೆಲ್ಲಾ ದೇವರುಗಳನ್ನು ಪೂಜಿಸುತ್ತಾರೆ. ಮಳೆಲೋರು ಎಲ್ಲ ಬೆಡಗು ಒಳಪಂಗಡಗಳೊಂದಿಗೆ ವೈವಾಹಿಕ ಸಂಬಂಧಗಳನ್ನು ಬೆಳೆಸುತ್ತಾರೆ. ಅಂದರೆ ಇವರು ಎಲ್ಲ ಕುಲಕ್ಕೂ(ಬೆಡಗು) ನೆಂಟರಾಗಿ ನಡೆದುಕೊಳ್ಳುತ್ತಾರೆ. ಈ ಮೂರು ಪಂಗಡಗಳೊಂದಿಗೆ 'ಎನುಮಲೋರು' (ಎಮ್ಮೆಯವರು) ಎಂಬ ಇನ್ನೊಂದು ಪ್ರಮುಖ ಪಂಗಡವೂ ಇದೆ. ಇವಲ್ಲದೆ ಅಲ್ಪಸಂಖ್ಯೆಯ ಜನಸಮುದಾಯದ ಅನೇಕ ಬೆಡಗುಗಳು ಇವೆ(ಬೆಡಗುಗಳು ಅಣ್ಣ-ತಮ್ಮ ಹಾಗೂ ಸಂಬಂಧಗಳನ್ನು ನಿರ್ಧರಿಸಲು ಸಹಾಯಕವಾಗುತ್ತವೆ).

ಈ ಸಮುದಾಯದವರು ಪೂಜಿಸುವ ಪ್ರಮುಖ ದೈವಗಳು -ಕಾಟಂಲಿಂಗ, ಚಿತ್ರಲಿಂಗ, ಬೋರೆ ದೇವರು, ಬೋಸೆ ದೇವರು, ಗಾದಿರಿ ಪಾಲನಾಯಕ, ಜಗಲೂರು, ಪಾಪನಾಯಕ, ಮಾರಮ್ಮ, ಬಂಗಾರ ದೇವರು, ಬೊಮ್ಮಲಿಂಗ, ಓಬಳನರಸಿಂಹಸ್ವಾಮಿ ಮುಂತಾದವುಗಳು.

ಇವರು ಮದುವೆಯ ಸಂದರ್ಭದಲ್ಲಿ ಆಚರಿಸುವ ಸಂಪ್ರದಾಯಗಳು ವಿಶಿಷ್ಟವಾಗಿವೆ. ಮದುವೆಯ ನಿಶ್ಚಿತಾರ್ಥದ ಸಂದರ್ಭದಲ್ಲಿ ನಡೆಸುವ ಕ್ರಿಯೆಯನ್ನು 'ವೀಳ್ಯಶಾಸ್ತ್ರ' ಎನ್ನುತ್ತಾರೆ. ಕಂಬಳಿ ಗದ್ದಿಗೆಯ ಮೇಲೆ ಮೂರು ವೀಳ್ಯಗಳನ್ನು

ಇಟ್ಟಿರುತ್ತಾರೆ. ಈ ಕಂಬಳಿಯನ್ನು ಹಾಸುವವನು 'ಮಳೆಲೋರವನು' ಈ ವೀಳ್ಯಗಳನ್ನು ಮಂದಲೋರ ವೀಳ್ಯ, ಮಲ್ಲ ನಾಯಕನೋರ ವೀಳ್ಯ, ಮಳೆಲೋರ ವೀಳ್ಯ ಎನ್ನುತ್ತಾರೆ. ಇವು ಆಯಾ ಒಳಪಂಗಡಗಳ ಹಿರಿಯರ ಮೂಲ ಪುರುಷರ ಹೆಸರಿನಲ್ಲಿದ್ದು ಅವರಿಗೆ ತೋರುವ ಸಾಂಕೇತಿಕ ಗೌರವ ಇದಾಗಿದೆ. ಆಯಾ ಒಳಪಂಗಡಗಳ ವಂಶಸ್ಥರು ಇವುಗಳನ್ನು ಪಡೆಯುತ್ತಾರೆ. ಮೊದಲೆರಡು ವೀಳ್ಯಗಳನ್ನು ಕಂಬಳಿ ಗದ್ದಿಗೆಯ ಮೇಲಿನಿಂದ ಎತ್ತಿಕೊಟ್ಟರೆ ಕೊನೆಯದನ್ನು ಕಂಬಳಿಯ ಅಡಿಯಿಂದ ಎತ್ತಿಕೊಡುತ್ತಾರೆ.

ಈ ಸಮುದಾಯದ ಪುರಾಣ ಕಾಲದ ಮೂಲ ಪುರುಷರೂ, ವಿಭೂತಿ ಪುರುಷರೂ ಆದ ವಾಲ್ಮೀಕಿ, ಶಬರಿ, ಧರ್ಮವ್ಯಾಧ, ಏಕಲವ್ಯ ಮುಂತಾದವರುಗಳಿಗೆ ಯಾವ ಗೌರವದ ವೀಳ್ಯವನ್ನು ತೆಗೆದಿಡುವುದು ಇಂದಿಗೂ ಆಚರಣೆ ಯಲ್ಲಿದೆ. ಸಮಾಜದ ಮೇಲ್ವರ್ಗದವರ ಮದುವೆಗಳಲ್ಲಿರುವಂತೆ 'ಹರಣಿ'(ಪವಿತ್ರವಾದ ಕುಂಭ), ಧಾರೆ ಚಪ್ಪರ ಮತ್ತು ಹಸೆಕಟ್ಟೆ ಇರುವುದಿಲ್ಲ. ತಮ್ಮ ಜಾತಿಗೆ ಸೇರಿದ ಮನೆದೇವರುಗಳ ಪೂಜಾರಿಗಳೇ ಪೌರೋಹಿತ್ಯವನ್ನು ನಿರ್ವಹಿಸುತ್ತಾರೆ.

ಇವರಲ್ಲಿ ಕುಲಾಚಾರದ ಕಟ್ಟುಗಳನ್ನು ನಿರ್ದೇಶಿಸುವ ಹಾಗೂ ನಿಷೇದಿಸುವ 'ಕಟ್ಟೆಮನೆ'ಗಳಿರುತ್ತವೆ, ಇವುಗಳನ್ನು 'ಮ್ಯಾಸಮಂಡಲಿ'ಗಳೆನ್ನುತ್ತಾರೆ. ಚಳ್ಳಕೆರೆ ತಾಲ್ಲೂಕಿನ ನನ್ನಿವಾಳ, ಹಿರೇಹಳ್ಳಿ, ಗೌರಸಮುದ್ರಗಳಲ್ಲಿರುವ (ಐವೋಜಿ ಮಠ) ಕಟ್ಟೆಮನೆಗಳು ಉದಾಹರಣೆಯಾಗಿವೆ.

ಸತ್ತಾಗ ನಿರ್ವಹಿಸುವ ಕರ್ಮಗಳಲ್ಲೂ ಅವರದೇ ಆದ ಭಿನ್ನತೆಯನ್ನು ಕಾಣಬಹುದು. "ಸತ್ತವರನ್ನು ಸ್ಮಶಾನಕ್ಕೆ ಒಯ್ಯುವಾಗ ವಾರಸುದಾರನಾದವನು ಒಂದು ಮಣ್ಣಿನ ಮಡಿಕೆಯಲ್ಲಿ ಪಿಂಡವನ್ನು ಇಟ್ಟುಕೊಂಡು ಹೆಣದ ಮುಂದೆ ಸಾಗುತ್ತಾನೆ. ಮಾರ್ಗ ಮಧ್ಯದಲ್ಲಿ ಒಂದು ಹಸಿರುಗಿಡದ ಬುಡದಲ್ಲಿ ಪಿಂಡದ ಮಡಿಕೆಯನ್ನಿಟ್ಟು ಸ್ಮಶಾನಯಾತ್ರೆಯಲ್ಲಿ ಪಾಲ್ಗೊಂಡವರೆಲ್ಲರೂ ಕಲ್ಲುಗಳನ್ನು ಬೀರಿ ಆ ಮಡಕೆಯನ್ನು ಚೂರು ಮಾಡುತ್ತಾರೆ. ಮೂರನೆಯ ದಿನ ಸತ್ತವನ ಸಂಬಂಧಿಕರು ಸಮಾಧಿ ಪೂಜೆ ಮಾಡಿ ಮನೆಗೆ ಹಿಂತಿರುಗಿದ ನಂತರ 'ಕರಿ'ಯನ್ನು ತೀರಿಸುತ್ತಾರೆ. ಮೃತನು ಕೊನೆ ಉಸಿರೆಳೆದ ಜಾಗದಲ್ಲಿ ಒಂದು ಟಗರು ಮರಿಯನ್ನು ಬಲಿ ನೀಡುವ ಕರ್ಮಕ್ಕೆ 'ಕರಿ'ಯೆಂದು ಹೆಸರು. ಅದೇ ಮಾಂಸದಿಂದ ಮನೆಮಂದಿಗೆಲ್ಲಾ ಅಡುಗೆ ಮಾಡಿ ಉಣಬಡಿಸುತ್ತಾರೆ. ಬಡವರಾದವರು ಕಟುಕನಿಂದ ಟಗರಿನ ತಲೆಯನ್ನು ಕೊಂಡುತಂದಾದರೂ 'ಕರಿ' ತೀರಿಸುತ್ತಾರೆ. ಕರಿ ತೀರಿಸುವ ಕರ್ಮ ಮುಗಿಯುವವರಿಗೆ ಅನ್ಯರಿಗೆ ಆ ಮನೆಗೆ ಪ್ರವೇಶ ವಿರುವುದಿಲ್ಲ. ಹದಿನಾಲ್ಕನೆಯ ದಿನ ಕೈಲಾಸ ಆರಾಧನೆಯನ್ನು ಸತ್ತವರ ಹೆಸರಿನಲ್ಲಿ ತಮ್ಮ ಯೋಗ್ಯತಾನುಸಾರ ನೆರವೇರಿಸುತ್ತಾರೆ.

ಇ.ಥರ್ಸ್‌ಟನ್‌ರವರು ಕರ್ನೂಲು ಭಾಗದ ಮ್ಯಾಸಬೇಡರ ಬಗ್ಗೆ ಬರೆಯುತ್ತಾ ಅಲ್ಲಿ ಇವರನ್ನು ಅಪರಾಧಿ ಬುಡಕಟ್ಟುಗಳು (Criminal Tribes) ಎಂದು ಗುರುತಿಸುತ್ತಾರೆ. 'ಶೌರ್ಯ-ಸಾಹಸಗಳಿಗೆ ಹೆಸರಾದ ಈ ಸಮುದಾಯ ಅನೇಕರು ದರೋಡೆಕೋರರೆಂತಲೂ, ಸುಲಿಗೆ ಕೋರರೆಂತಲೂ ಕುಖ್ಯಾತಿ ಪಡೆದವರು. ಅವರು ಶಸ್ತ್ರಸಜ್ಜಿತರಾಗಿ ಅರಣ್ಯಗಳಲ್ಲೂ, ಗುಡ್ಡಗಳಲ್ಲೂ ಸಂಚರಿಸುತ್ತಾ, ಗ್ರಾಮಗಳನ್ನು ಲೂಟಿ ಮಾಡುತ್ತಾ ಸಾಮಾನ್ಯರಿಗೆ ಸಿಂಹಪ್ರಾಯ ರಾಗಿರುತ್ತಿದ್ದರು ಎಂಬ ಅಭಿಪ್ರಾಯವನ್ನು ವಿದ್ವಾಂಸರು ವ್ಯಕ್ತಪಡಿಸುತ್ತಾರೆ.

ಮೂಲತಃ ಯುದ್ಧವೀರರೂ, ಬೇಟೆಗಾರರೂ ಆದ ಈ ಸಮುದಾಯಕ್ಕೆ ಪಾಳೆಯ ಪಟ್ಟುಗಳ ಅವನತಿಯ ನಂತರ ಕೆಲಸವಿಲ್ಲದಂತಾಯಿತು. ಬ್ರಿಟಿಷರ ಆಳ್ವಿಕೆಯಲ್ಲಿ ಬೇಟೆಗೆ ಬಂದೊದಗಿದ ನಿಷೇಧದಿಂದ ನಿರುದ್ಯೋಗಿಗಳಾದ ಇವರನ್ನು ಪರಿಸ್ಥಿತಿಯೇ ಅಪರಾಧ ಮಾಡಲು ಪ್ರಚೋದಿಸಿರಬೇಕು. ಇವರ ಅಪರಾಧಿ ನಡವಳಿಕೆಗಳನ್ನು ಸಮರ್ಥಿಸುವಂತಹ ಗಾದೆಗಳು ಇಂದೂ ಚಲಾವಣೆಯಲ್ಲಿವೆ.

ನಾಗರಿಕ ಸಮುದಾಯಗಳ ಸಂಪರ್ಕವಿಲ್ಲದೆ ಗಿರಿ-ಕಂದರ, ಅರಣ್ಯಗಳಲ್ಲಿ ಇದ್ದಂತಹ ಈ ಸಮುದಾಯ, ನಾಗರಿಕ ಜನರಲ್ಲಿ ತಮ್ಮ ಸಹಜ ಒರಟುತನದ ಮೂಲಕ ಅಸಹನೆ ಅಪನಂಬಿಕೆಗಳನ್ನು ಮೂಡಿಸಿರುವ ಸಾಧ್ಯತೆ ಇದೆ. ಈ ಸಮುದಾಯ ಇಂದು ಗೌರವಯುತ ನಡುವಳಿಕೆಯಿಂದ ಇದ್ದರೂ ಬೇರೆಯವರು ಇವರನ್ನು ಭಯಮಿಶ್ರಿತ ದೃಷ್ಟಿಯಲ್ಲೇ ನೋಡುತ್ತಿದ್ದಾರೆ. ಈ ಸಮುದಾಯದ ಕೆಲವು ಹಬ್ಬ ಮತ್ತು ಸಂಪ್ರದಾಯಗಳನ್ನು ಕುರಿತ ಪರಿಚಯವನ್ನು ಈ ಕೆಳಗೆ ನೀಡಲಾಗಿದೆ.

**ಗುಗ್ಗರಿ ಹಬ್ಬ :** ಹಿಂದೂಗಳಂತೆ ಬೇರೆಲ್ಲಾ ಹಬ್ಬಗಳನ್ನು ಇವರು ಆಚರಿಸಿದರೂ, 'ಗುಗ್ಗರಿ ಹಬ್ಬ' ಅವರನ್ನು ಬೇರೆಯವರಿಂದ ಪ್ರತ್ಯೇಕಿಸುವಷ್ಟು ವಿಶಿಷ್ಟವಾಗಿದೆ. ತಮ್ಮ ಹೊಲಗಳಲ್ಲಿ ಹೊಸದಾಗಿ ಬೆಳೆದ ಹುರುಳಿ, ತೊಗರಿ, ಹಲಸಂದೆ, ಹೆಸರುಕಾಳು ಮುಂತಾದ ಕಾಳುಗಳಿಂದ 'ಗುಗ್ಗರಿ' ಬೇಯಿಸಲು ಬರುವಂತಹ ದ್ವಿದಳ ಧಾನ್ಯಗಳನ್ನು ಬೆಳೆಯುತ್ತಾರೆ. ಗುಗ್ಗರಿ ಹಬ್ಬದ ದಿನ ಎಲ್ಲರೂ ತಾವು ಬೆಳೆದ ಈ ಧಾನ್ಯಗಳನ್ನು ತಂದು ದೇವಸ್ಥಾನದಲ್ಲಿ ಸುರಿಯುತ್ತಾರೆ. ಬೇಯಿಸಿದ ನಂತರ ದೇವರುಗಳಿಗೆ 'ಎಡೆ' ಹಾಕುತ್ತಾರೆ. 'ಪ್ರಸಾದ'ವೆಂದು ತಿನ್ನುತ್ತಾರೆ ಹಾಗೂ ಮುಂದಿನ ಗುಗ್ಗರಿ ಹಬ್ಬದವರೆಗೂ ಬಳಸುತ್ತಾರೆ.

ಇದೇ ಹಬ್ಬದಲ್ಲಿ ಇನ್ನೊಂದು ವಿಶಿಷ್ಟ ಕಾರ್ಯಕ್ರಮ ನಡೆಯುತ್ತದೆ. ಗುಗ್ಗರಿ 'ಎಡೆ'ಯ ನಂತರ ಈ ದೇವರುಗಳನ್ನು ಊರ ಹೊರಗೆ ಮೆರವಣಿಗೆಯಲ್ಲಿ ಕೊಂಡೊಯ್ಯುತ್ತಾರೆ. ಸಾಮಾನ್ಯವಾಗಿ ಇವರ ದೇವರುಗಳೆಲ್ಲ 'ಬುಟ್ಟಿದೇವರು'

ಅಥವಾ 'ಪೆಟ್ಟಿಗೆ ದೇವರು'ಗಳಾಗಿರುತ್ತವೆ. ತೆಲುಗಿನಲ್ಲಿ ಇವನ್ನು 'ದೇವಗಂಪಲು' ಎನ್ನುತ್ತಾರೆ. 'ದೇವ' ಎಂದರೆ 'ದೇವರುಗಳು', 'ಗಂಪ' ಎಂದರೆ ಪುಟ್ಟಿ(ತಟ್ಟಿ) ಅಥವಾ ಹೆಡಿಗೆ; ಆದ್ದರಿಂದ ಇವನ್ನು ಪುಟ್ಟಿಯಲ್ಲಿರುವ ದೇವರುಗಳು (ದೇವಗಂಪಲು) ಎನ್ನುತ್ತಾರೆ. ಹಿಂದುಳಿದ ವರ್ಗದ ಜನರ ಬಹಳಷ್ಟು ದೇವರುಗಳು ಪುಟ್ಟಿ, ತಟ್ಟಿ, ಹೆಡಿಗೆ ಅಥವಾ ಪೆಟ್ಟಿಗೆಗಳಲ್ಲೇ ಅವರ ವಾಸ. ಉದಾಹರಣೆಗೆ ಶ್ರೀಶೈಲದಿಂದ ಮ್ಯಾಸನಾಯಕರು ವಲಸೆ ಬರುವಾಗ ತಮ್ಮ ಜೊತೆಯಲ್ಲಿ ತಮ್ಮ ಹನ್ನೆರಡು ಪೆಟ್ಟಿಗೆ ದೇವರುಗಳನ್ನು ಜೊತೆಯಲ್ಲೇ ತಂದಿರುವುದಾಗಿ ಹೇಳುತ್ತಾರೆ.

ಊರು ನಾಯಕರು ಮಾರಮ್ಮನನ್ನು ತಟ್ಟಿಯಲ್ಲಿ ಅಥವಾ ಪೆಟ್ಟಿಗೆಯಲ್ಲಿ ಇಟ್ಟುಕೊಂಡು ಬೀದಿ ತಿರುಗುತ್ತಾ ಭಿಕ್ಷೆ ಎತ್ತುವುದನ್ನು ಕಾಣಬಹುದು. ಬೆಸ್ತರು 'ಜೋಕುಮಾರ'ನನ್ನು ತೂರುವ ಪುಟ್ಟಿ ಅಥವಾ ಮೊರದಲ್ಲಿ ಇಟ್ಟು ಮೆರೆಸು ವುದನ್ನು ಇಲ್ಲಿ ನೆನೆಯಬಹುದು. ಊರ ಹೊರಗೆ ಕರೆದುಕೊಂಡು ಬಂದ ದೇವರುಗಳನ್ನು ಒಂದು ಕಡೆ ನಿಲ್ಲಿಸುತ್ತಾರೆ. ದೇವರುಗಳ ಹೆಸರಿನಲ್ಲಿ ಬಿಟ್ಟ ದನಗಳನ್ನು ಕಾಯುವ ಪವಿತ್ರ ಕಾಯಕ ಮಾಡುವ ಪೂಜಾರಿ ಮ್ಯಾಸನಾಯಕರ ಸಾಂಸ್ಕೃತಿಕ ವೀರರಾದ ಗಾದಿರಿ ಪಾಲನಾಯಕ ಮತ್ತು ಜಗಲೂರು ಪಾಪನಾಯಕ ಅವರುಗಳು ಎತ್ತಿನ ಕಿಲಾರಿಗಳಾಗಿದ್ದರು. ಕೆಲವು ದೇವರ ದನಗಳನ್ನು ಅಲ್ಲಿಗೆ ತಂದು ಸೇರಿಸುತ್ತಾರೆ. ಇಲ್ಲಿಗೆ ಬರುವ ಈ ಬುಟ್ಟಿ ದೇವರುಗಳನ್ನು 'ಉದಿ' ಎಂದೂ, ಬಂದು ಸೇರುವ ದೇವರ ದನಗಳನ್ನು 'ಪದಿ' ಎಂದೂ ಇವೆರಡೂ ಸೇರುವುದನ್ನು 'ಉದಿ-ಪದಿ'ಗಳ ಸೇರುವಿಕೆ ಎಂದು ಭಕ್ತಿಯಿಂದ ಪೂಜಿಸುತ್ತಾರೆ.

**ವಾಸೆ ಕೊಯ್ಯೋದು :** ಇದು ಐದು-ಹತ್ತು ವರುಷಗಳಿಗೊಮ್ಮೆ ನಡೆಸುವ ಅಪರೂಪದ ವಿಶಿಷ್ಟ ಸಂಪ್ರದಾಯ. ತಮ್ಮ ಮನೆ ದೇವರನ್ನು, ಇಷ್ಟದೇವತೆಯನ್ನು ಬೆಳಗಿನ ಜಾವವೇ 'ಹೊಳೆ'ಗೆ ಒಯ್ದು ಅಲ್ಲಿ ವಾಸೆ ಕೊಯ್ಯಲು ಬಳಸುವುದು ಅಚ್ಚಕಪ್ಪು ಬಣ್ಣದ ಹೋತವನ್ನು ಮಾತ್ರ! ಇದರ ಮೈಯಲ್ಲಿ ಒಂದೇ ಒಂದು ಬೇರೆ ಬಣ್ಣದ ಕೂದಲು ಇರಕೂಡದು! ಸೂರ್ಯೋದಯಕ್ಕೆ ಮೊದಲೇ ಈ ಸಂಪ್ರದಾಯವನ್ನು ನೆರವೇರಿಸಬೇಕು. ಹೋತವನ್ನು ಅಂಗಾತ ಮಲಗಿಸಿಕೊಂಡು ಅದರ ಕುತ್ತಿಗೆ ಕೊಯ್ಯುತ್ತಾರೆ. ಅದರ ಕುತ್ತಿಗೆ ಕೊಯ್ದು ನಂತರ 'ಸೂರ್ಯನ ನಮಸ್ಕಾರ' ಮಾಡುತ್ತಾರೆ. ಇದು ಈ ಸಂಪ್ರದಾಯಕ್ಕೆ ವಿಶಿಷ್ಟತೆ ತಂದುಕೊಟ್ಟ 'ಯರಮಂಚನಾಯಕ'ನಿಗೆ ತೋರುವ ಗೌರವ ಎಂದು ಭಾವಿಸುತ್ತಾರೆ. ಇದನ್ನೇ 'ವಾಸೆ ಕೊಯ್ಯುವುದು ಅಥವಾ ನೋಮು ತೀರಿಸುವುದು' ಎನ್ನುತ್ತಾರೆ. ಈ ಕಾರ್ಯ ನಿರ್ವಹಿಸುವವರಲ್ಲಿ ಅಣ್ಣ-ತಮ್ಮಂದಿರು ಇದ್ದಾಗ ವಾಸೆಕೊಯ್ಯುವ ಮೊದಲ ಹಕ್ಕು ಅಣ್ಣನದು, ನಂತರ ತಮ್ಮನ ಸರದಿ. ಇದರಲ್ಲಿ ಸ್ವಲ್ಪ ಏರುಪೇರಾದರೂ ದೊಡ್ಡ ರಾದ್ಧಾಂತವೇ ನಡೆದುಬಿಡುತ್ತದೆ.

**ಥಿಕ್ಕಿ ಹಬ್ಬ :** ಚಳ್ಳಕೆರೆಯಿಂದ ವಾಯುವ್ಯಕ್ಕೆ ೮ ಕಿ.ಮೀ. ದೂರದಲ್ಲಿರುವ ನನ್ನಿವಾಳ ಮ್ಯಾಸಬೇಡರ ಒಂದು ಪ್ರಮುಖ ವಾದ ನೆಲೆ ಮತ್ತು ಅವರ ಸಾಂಸ್ಕೃತಿಕ ಕೇಂದ್ರ. ನನ್ನಿವಾಳದ ಸುತ್ತ ೨-೩ ಕಿ.ಮೀ. ಅಂತರದಲ್ಲಿ ಹತ್ತಾರು ಮ್ಯಾಸಬೇಡರ ಹಟ್ಟಿಗಳಿವೆ. ಇಲ್ಲಿ ಅಪರೂಪಕ್ಕೆ ಥಿಕ್ಕಿ ಹಬ್ಬ ನಡೆಯುತ್ತದೆ. ಸುತ್ತಲಿನ ಹಟ್ಟಿಗಳಿಂದ ೧೨ ಪೆಟ್ಟಿಗೆ ದೇವರುಗಳು ಸೇರುತ್ತವೆ. ೧೨ ಪೆಟ್ಟಿಗೆ ದೇವರುಗಳಲ್ಲಿ ಒಂದಾದ ಬಂಗಾರ ದೇವರಿಗೆ ತೆಂಗಿನಕಾಯಿ ಸೇರುವುದಿಲ್ಲ. ಹೀಗಾಗಿ ಆ ದೇವರಿಗೆ ತೆಂಗಿನ ಕಾಯಿ ಒಡೆಯುವಂತಿಲ್ಲ. ಆದರೆ 'ತಲೆಯನ್ನೇ ತೆಂಗಿನಕಾಯಿ' ಎಂದು ಭಾವಿಸಿ, ಹರಕೆ ಹೊತ್ತ ಅತ್ತೆ-ಸೊಸೆಯರು ಅಂದರೆ ನೆಂಟರು-ಭಂಟರು, ಒಬ್ಬರ ತಲೆಕೂದಲು ಮತ್ತೊಬ್ಬರು ಹಿಡಿದು ಒಬ್ಬರ ತಲೆಗೊಬ್ಬರು 'ಫಟ್... ಫಟ್...' ಎಂದು 'ಥೀ' ಕುಟ್ಟಿಕೊಳ್ಳುವ ಕ್ರಿಯೆಯ ಮೂಲಕ ಅಪರೋಕ್ಷವಾಗಿ ತೆಂಗಿನಕಾಯಿ ಅರ್ಪಿಸಿದ ತೃಪ್ತಿಪಡುತ್ತಾರೆ.

**ಊರು ನಾಯಕರು :** ಈ ಸಮುದಾಯ ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ, ತುಮಕೂರು ಜಿಲ್ಲೆಯ ಪೂರ್ವಭಾಗದ ತಾಲೂಕುಗಳಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಮ್ಯಾಸನಾಯಕರಿಗೆ ಸಹಜ ಕಾಯಕವಾದ ಯುದ್ಧಕ್ಕೆ ಅಂಜಿ ಮನೆಗಳಲ್ಲಿ ಉಳಿದ ಈ ಜನಗಳನ್ನು ಕುಲಾಚಾರದ ಕಟ್ಟಿನಿಂದ ಹೊರಗಿಟ್ಟು ಹಟ್ಟಿಗಳಿಂದ ಇವರನ್ನು ಉಚ್ಚಾಟನೆ ಮಾಡಿದ್ದರಿಂದ ಅನಿವಾರ್ಯವಾಗಿ ನಾಗರಿಕ ಜನಗಳ ಮಧ್ಯೆ ಬಂದು ಊರುಗಳಲ್ಲಿ ಬದುಕಬೇಕಾಗಿದ್ದರಿಂದ ಇವರನ್ನು 'ಊರು ನಾಯಕರು' ಎಂದು ಕರೆಯಲಾಯಿತೆಂದು ಹಿರಿಯರೊಬ್ಬರು ಅಭಿಪ್ರಾಯ ಪಡುತ್ತಾರೆ.

ಇನ್ನೊಂದು ಹೇಳಿಕೆಯ ಪ್ರಕಾರ- ಮ್ಯಾಸಬೇಡರಿಗೆ ನಿಷಿದ್ಧವಾದ ಕೋಳಿ ಮತ್ತು ಹಂದಿ ಸೇವನೆ ಮಾಡಿದ್ದರಿಂದ ಇವರನ್ನು ಜಾತಿಯಿಂದ ಹೊರಗೆ ಹಾಕಲಾಯಿತು ಎನ್ನುತ್ತಾರೆ. ಅದೇನೆ ಇರಲಿ, ಈ ಜನರು ಊರುಗಳಲ್ಲಿದ್ದರೂ ಹೇಳಿಕೊಳ್ಳುವಂತಹ ಹೆಚ್ಚಿನ ನಾಗರಿಕತೆಯ ಲಕ್ಷಣಗಳೇನೂ ಕಾಣುವುದಿಲ್ಲ. ಆದರೆ ನಾಗರಿಕ ಸಮುದಾಯದ ರೀತಿ-ನೀತಿಗಳನ್ನು ಅನುಕರಿಸುವ ಈ ಜನರ ಮದುವೆ ಸಂಪ್ರದಾಯದಲ್ಲಿ ಶಿಷ್ಟ ಸಮುದಾಯದ ಆಚರಣೆಗಳನ್ನು ಕಾಣಬಹುದು. ಮ್ಯಾಸನಾಯಕರು ಊರ ನಾಯಕರೊಂದಿಗೆ ವೈವಾಹಿಕ ಸಂಬಂಧ ಬೆಳೆಸುವುದಿಲ್ಲ(ಆದರೆ ಇತ್ತೀಚೆಗೆ ಯುವಕರು ಈ ಕಟ್ಟಳೆಗಳನ್ನು ಮುರಿಯುತ್ತಿದ್ದಾರೆ), ಆದರೆ ಊರು ನಾಯಕರು ಮ್ಯಾಸನಾಯಕರೊಂದಿಗೆ ಸಂಬಂಧಗಳನ್ನು ಬೆಳೆಸಲು ಕಾತುರರಾಗಿದ್ದಾರೆ. ಈ ಸಮುದಾಯದ ಆರಾಧ್ಯ ದೈವ ಮಲೆಮಹದೇಶ್ವರ.

ಇವರಲ್ಲಿ ಕೂಡ್ಲಿಗಿ ಭಾಗದ ಕೆಲವು ವರ್ಗದವರು ವಿಜಯನಗರದ ಅಚ್ಯುತದೇವರಾಯನ ಕಾಲದಲ್ಲಿ ರಾಜರ ಭೋಗದ ವಸ್ತುಗಳಾಗಿದ್ದರು. ವಿಜಯನಗರ ಪತನದ ನಂತರ ಬೀದಿಗೆ ಬಿದ್ದ ಈ ಜನರು ಕೂಡ್ಲಿಗಿಯಲ್ಲಿ ದಟ್ಟವಾಗಿ

ನೆಲೆಸಿದ್ದಾರೆ. ಈಗ ನಾಟಕ ಕಲೆಯಿಂದ ಉದರಪೋಷಣೆ ಮಾಡುತ್ತಿದ್ದಾರೆ. ಇನ್ನೂ ಕೆಳಹಂತದಲ್ಲಿರುವ ಜನರು ಹಳ್ಳಿಗಳಲ್ಲಿ ಉರುಮೆ ಬಾರಿಸುತ್ತಾ, ಹೊತ್ತಾಡೋ ಮಾರಮ್ಮನನ್ನು ಹೊತ್ತು, ಮೈಗೆ ಚಾಟಿಯಿಂದ ರಕ್ತ ಬರುವಂತೆ ಹೊಡೆದುಕೊಂಡು, ಜನರಿಂದ ಕಾಳುಕಡ್ಡಿ, ದವಸ, ಧಾನ್ಯ ಪಡೆದು ಜೀವನ ಮಾಡುವ ಚಿಂತಾಜನಕ ಪರಿಸ್ಥಿತಿ ಯಲ್ಲಿದ್ದಾರೆ.

## ೧. ೩. ಪ್ರಾಥಮಿಕ ಶಿಕ್ಷಣದ ಸಾರ್ವತ್ರೀಕರಣ

ದಾಖಲೆ (ವಿಧಿ) ೪೫ರ ಪ್ರಕಾರ "ನಮ್ಮ ರಾಷ್ಟ್ರದ ೧೪ ವರ್ಷದವರೆಗಿನ ಎಲ್ಲಾ ಮಕ್ಕಳಿಗೆ ಉಚಿತ ಹಾಗೂ ಕಡ್ಡಾಯ ಪ್ರಾಥಮಿಕ ಶಿಕ್ಷಣವನ್ನು ನೀಡಬೇಕು."[೬]

ಪ್ರಾಥಮಿಕ ಶಿಕ್ಷಣದ ಸಾರ್ವತ್ರೀಕರಣ ರಾಷ್ಟ್ರದ ಪ್ರಮುಖ ಯೋಜನೆಯಾಗಿದ್ದು, ನಿರಂತರ ಪ್ರಯತ್ನದಿಂದ ಭಾರತ ಸರ್ಕಾರವು ಕಾರ್ಯರೂಪಕ್ಕೆ ತಂದಿತು. ಈ ಯೋಜನೆಯು ಕೇವಲ ಶಾಲಾ ವಯಸ್ಸಿನ ಮಕ್ಕಳ ದಾಖಲಾತಿಯಾಗಿರದೆ, ಮಕ್ಕಳಿಗಾಗಿ ಅರ್ಥಪೂರ್ಣವಾದ ಹಾಗೂ ಉಪಯುಕ್ತ ಶಿಕ್ಷಣ ಒದಗಿಸುವಂತಹದ್ದು. ಈ ಸಾಧನೆಯನ್ನು ಶಾಲಾ ಪಠ್ಯ ಕ್ರಮದಲ್ಲಿ ಪೂರಕ ಕಲಿಕೆಯ ಫಲಿತಾಂಶ, ನಿಯಮಾವಳಿಗಳಲ್ಲಿಯ ಗಣನೀಯ ಬದಲಾವಣೆ ಹಾಗೂ ಭೋದನಾ ವಿಧಾನವು ಪರಿಪೂರ್ಣ ಸಾಧನೆಗೆ ಸಹಾಯಕವಾಗಿವೆ.

ನಮ್ಮ ದೇಶದ ಪ್ರಾಥಮಿಕ ಶಿಕ್ಷಣ ಪದ್ಧತಿಯು ಏಕರೂಪದ್ದಾಗಿರದೆ ಅದು ಅನೇಕ ಪದ್ಧತಿಯ ಮಿಶ್ರಣವಾಗಿದೆ. ಇವುಗಳಲ್ಲಿ ಕೆಲವು ಶಾಲೆಗಳು ರಾಜ್ಯದ ಪಠ್ಯಕ್ರಮವನ್ನು ಅನುಸರಿಸಿದರೆ ಕೆಲವು ಶಾಲೆಗಳು ಆಂಗ್ಲ ಬೋಧನಾಪದ್ಧತಿ ಜಾರಿಯಲ್ಲಿದೆ. ಕೆಲವು ಶಾಲೆಗಳು ಅತಿ ದೂರದ ಗ್ರಾಮದಲ್ಲಿದ್ದು ಒಬ್ಬರೋ ಇಲ್ಲವೆ ಇಬ್ಬರು ಶಿಕ್ಷಕರನ್ನು ಹೊಂದಿದವು ಗಳಾಗಿವೆ. ಈ ರೀತಿಯ ತಾರತಮ್ಯಗಳು ಕೇವಲ ಶಾಲಾ ಬಗೆಗಳಲ್ಲಿ ಆಗಿರದೆ ಶಿಕ್ಷಣ ಪಡೆಯುವ ಮಕ್ಕಳನ್ನು ಒಳಗೊಂಡಿದೆ.

ಕೆಲವು ಶಾಲೆಗಳು ಬಾಲಕರಿಗೆ ಸೀಮಿತವಾಗಿದ್ದರೆ, ಕೆಲವು ಕೇವಲ ಹೆಣ್ಣು ಮಕ್ಕಳಿಗೆ ಸೀಮಿತವಾಗಿವೆ. ಇನ್ನೂ ಕೆಲವು ಶಾಲೆಗಳು ಬಾಲಕ ಬಾಲಕಿಯರನ್ನು ಹೊಂದಿವೆ. ಕೆಲವು ಶಾಲೆಗಳಲ್ಲಿ ನಗರ ಪ್ರದೇಶದ ಉನ್ನತ ಕುಟುಂಬ ಮಕ್ಕಳು ದಾಖಲಾದರೆ, ಶಿಕ್ಷಣವೇ ಕಾಣದ ಗ್ರಾಮೀಣ ಕುಟುಂಬದ ಮಕ್ಕಳು ಕೂಡ ದಾಖಲಾಗುತ್ತಾರೆ. ಕೆಲವು ಶಾಲೆಗಳಲ್ಲಿ ಮಾಧ್ಯಮ ಹಾಗೂ ಹೆಚ್ಚು ಆದಾಯವಿರುವ ಕುಟುಂಬದ ಮಕ್ಕಳು ದಾಖಲಾಗುತ್ತಾರೆ. ಇದರ ಜೊತೆ

ಜೊತೆಗೆ ಸಮಾಜದ ತುಳಿತಕ್ಕೆ ಒಳಗಾದ ಕುಟುಂಬದ ಮಕ್ಕಳೂ ಕೂಡ ಶಾಲೆಗೆ ದಾಖಲಾಗುತ್ತಾರೆ. ಇದರಿಂದ ನಗರದ ಕೊಳಚೆ ಪ್ರದೇಶದಲ್ಲಿ ಕೊಳಚೆ ಶಾಲೆಗಳು, ಬುಡಕಟ್ಟು ಶಾಲೆಗಳನ್ನು ಕುಗ್ರಾಮಗಳಿಗೆ ಹಾಗೂ ಗುಡ್ಡಗಾಡು ಪ್ರದೇಶಗಳಲ್ಲಿ ವರ್ಗೀಕರಿಸಲಾಗಿದೆ. ಈ ರೀತಿಯ ಹಲವು ವ್ಯತ್ಯಾಸಗಳೆಡೆಗೆ ಬೆಳಕು ಚೆಲ್ಲಿ ಶಾಲೆಗೆ ಹೋಗುವ ಮಕ್ಕಳಲ್ಲಿ ಮೇಲಿನ ವ್ಯತ್ಯಾಸಗಳನ್ನು ಪ್ರಾಥಮಿಕ ಶಿಕ್ಷಣದ ಸಾರ್ವತ್ರೀಕರಣವು ತೊಲಗಿಸಬಲ್ಲದೇ? ಒಂದು ವೇಳೆ ಈ ಯೋಜನೆ ನಮ್ಮ ದೇಶದ ಶಾಲಾ ಮಕ್ಕಳಿಗೆ ಸಮಾನ ಶಿಕ್ಷಣ ಸಮಾನ ಅವಕಾಶ ನೀಡಿದಲ್ಲಿ ಸಾರ್ವತ್ರಿಕ ದಾಖಲಾತಿಯಲ್ಲಿಯೂ ಪ್ರಗತಿಯನ್ನು ಕಾಣಬಹುದಾಗಿದೆ.

### ೧. ೪. ಅಧ್ಯಯನದ ಅಗತ್ಯ ಮತ್ತು ವ್ಯಾಪ್ತಿ

ನಮ್ಮ ರಾಷ್ಟ್ರವು ವಿವಿಧತೆಯಲ್ಲಿ ಏಕತೆ ಮತ್ತು ವೈವಿಧ್ಯತೆಯನ್ನು ಹೊಂದಿದ್ದು, ಪರಿಶಿಷ್ಟ ಪಂಗಡಗಳ ಅಭ್ಯುದಯ ವನ್ನು ಗುರಿಯಾಗಿಟ್ಟುಕೊಂಡು ಯೋಜನಾ ಬದ್ಧ ಅಭಿವೃದ್ಧಿ ಕಾರ್ಯಕ್ರಮಗಳಿದ್ದರೂ ಸಹ ಕರ್ನಾಟಕದಲ್ಲಿ ಈ ಕಾರ್ಯಗಳ ಅಡಿಯಲ್ಲಿ ಆಗಿರುವ ಪ್ರಗತಿ ಚೇತೋಹಾರಿಯಾಗಿಲ್ಲ. ಪರಿಶಿಷ್ಟ ಪಂಗಡಗಳ ಪ್ರಚಲಿತ ಸಾಕ್ಷರತಾಮಟ್ಟ ಮೇಲಿನ ಅಂಶಗಳನ್ನು ಪುಷ್ಟೀಕರಿಸುತ್ತದೆ. ಈ ಬುಡಕಟ್ಟುಗಳ ದೊಡ್ಡ ಭಾಗ ೬೮.೭ ದಶಲಕ್ಷ ಜನರು ಹಳ್ಳಿಗಳಲ್ಲಿ ವಾಸಿಸುತ್ತಿದ್ದರೆ, ಕೇವಲ ೧೦.೦ ದಶಲಕ್ಷ ಜನ ಪಟ್ಟಣಗಳಲ್ಲಿ ವಾಸಿಸುತ್ತಾರೆ. ಬುಡಕಟ್ಟು ಸಮುದಾಯದ ಸಂಖ್ಯೆಯು ಇಡೀ ದೇಶದ ಜನಸಂಖ್ಯೆಯ ಶೇಕಡ ೧೧ರಷ್ಟಿದೆ.

ವಿಷಾದನೀಯ ಅಂಶವೆಂದರೆ ೨೦೦೧ರ ಜನಗಣತಿಯ ಪ್ರಕಾರ ಕರ್ನಾಟಕದ ಒಟ್ಟು ಜನಸಂಖ್ಯೆಯ ೫೨,೭೩,೯೫೮ ಆಗಿದ್ದು, ಅಕ್ಷರಸ್ಥರ ಸಂಖ್ಯೆ ೧೫,೧೩೨,೮೦೨ ಆಗಿರುತ್ತದೆ. ಅಕ್ಷರಸ್ಥರಲ್ಲಿ ಸ್ತ್ರೀಯರು ೯,೫೪೫,೬೪೦ ಆಗಿದ್ದರೆ ಪುರುಷರ ಸಂಖ್ಯೆಯು ೫,೫೩೭,೧೬೨ ಆಗಿರುತ್ತದೆ. ನಮ್ಮ ರಾಜ್ಯದ ಒಟ್ಟಾರೆ ಅಕ್ಷರಸ್ಥರು ಶೇಕಡ ೬೭.೦೪ ಆಗಿರುತ್ತದೆ. ಅದರಲ್ಲಿಯು ಬುಡಕಟ್ಟು ಸಮುದಾಯದ ಶೈಕ್ಷಣಿಕ ಮಟ್ಟ ತೃಪ್ತಿಕರವಾಗಿಲ್ಲ. ಹೆಣ್ಣುಮಕ್ಕಳ ಸಾಕ್ಷರತಾ ಮಟ್ಟ ಶೇಕಡ ೧೮.೧೯ರಷ್ಟಿದೆ. ಸಾಕ್ಷರತೆಯು ಮಾತ್ರ ಪ್ರಗತಿಯನ್ನು ಸಾಧಿಸಲಾರದು. ಶಿಕ್ಷಣವು ಆರ್ಥಿಕ ಪ್ರಗತಿಯನ್ನು ಸಾಧಿಸಲು ಸಹಾಯಕವಾಗಿದೆ. ಪ್ರತಿವ್ಯಕ್ತಿ ಕಲಿಕೆಯಿಂದ ಜ್ಞಾನವನ್ನು ಪಡೆದು ರಾಷ್ಟ್ರದ ಆರ್ಥಿಕ ಸ್ವಾವಲಂಬನೆ ಹಾಗೂ ಪ್ರಗತಿಗೆ ಸಹಾಯಕವಾಗಬೇಕಿದೆ.

ಶಿಕ್ಷಣವು ತನ್ನದೇ ಆದ ರೂಪರೇಷೆಗಳನ್ನು, ವಿಧಿವಿಧಾನಗಳನ್ನು ಒಳಗೊಂಡಿದ್ದು, ವ್ಯಕ್ತಿಗೆ ಜ್ಞಾನ ನೀಡುವಲ್ಲಿ [illegible]ಕಾರಿಯಾಗಿದೆ. ಇದರಲ್ಲಿ ಬುಡಕಟ್ಟು ಸಮುದಾಯದ ಅವಶ್ಯಕತೆಗಳು ಒಳಗೊಂಡಿದ್ದರೂ ಆರ್ಥಿಕ, ಸಾಮಾಜಿಕ

ಕಾರಣಗಳಿಂದ ಈ ವರ್ಗವು ಇನ್ನೂ ಹಿಂದುಳಿದಿದೆ. ಬುಡಕಟ್ಟು ಸಮುದಾಯದ ಆರ್ಥಿಕ, ಸಾಮಾಜಿಕ ಸ್ಥಿತಿಗತಿಗಳನ್ನು ಉತ್ತಮಗೊಳಿಸುವ ನಿಟ್ಟಿನಲ್ಲಿ ಭಾರತ ಸರ್ಕಾರ "ಸರ್ವತೋಮುಖ ಅಭಿವೃದ್ಧಿ" ಕಾರ್ಯಕ್ರಮವನ್ನು ಹಮ್ಮಿಕೊಂಡಿದೆ. ಈ ಉದ್ದೇಶವನ್ನು ಈಡೇರಿಸಲು ವಿಶೇಷ ಯೋಜನೆಗಳನ್ನು ಕಾರ್ಯರೂಪಕ್ಕೆ ತಂದಿದೆ.

ಭಾರತ ಸಂವಿಧಾನದ ಕಾಲಂ ೪೬ರ ಪ್ರಕಾರ "ಹಿಂದುಳಿದ ವರ್ಗಗಳ ಶಿಕ್ಷಣ ಮತ್ತು ಆರ್ಥಿಕ ಅಭಿವೃದ್ಧಿಗೆ ವಿಶೇಷ ಜಾಗೃತಿ ವಹಿಸುವುದು, ಅದರಲ್ಲಿ ವಿಶೇಷವಾಗಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಸಾಮಾಜಿಕ ಅಂಧಕಾರ ಹಾಗೂ ಸಾಮಾಜಿಕ ಪಿಡುಗುಗಳಿಂದ ರಕ್ಷಿಸುವುದೇ ಆಗಿದೆ."[೬] ಶಿಕ್ಷಣದ ಈ ಎಲ್ಲಾ ಯೋಜನೆಗಳು ಪರಿಶಿಷ್ಟ ಪಂಗಡದ ಕೇವಲ ಆರ್ಥಿಕ ಸ್ವಾವಲಂಬನೆ ಸಾಧಿಸುವುದು ಆಗಿರದೆ, ಬುಡಕಟ್ಟು ಸಮುದಾಯದ ಆಂತರಿಕ ಶಕ್ತಿಯನ್ನು ಬೆಳೆಸುವುದೂ ಆಗಿದೆ.

## ೧. ೫. ಸರ್ವರಿಗೂ ಸಮಾನ ಶಿಕ್ಷಣ

ಈ ವಿಷಯವು ಈಗಾಗಲೇ ತಿಳಿಸಿದ ಪ್ರಾಥಮಿಕ ಶಿಕ್ಷಣದ ಸಾರ್ವತ್ರೀಕರಣದ ಸಮಸ್ಯೆಯಾಗಿದ್ದು, ಮಗು ವಿವಿಧ ಬಗೆಯ ಶಾಲೆಗಳಿಂದ ಕಲಿತ ಪ್ರತಿಫಲವಾಗಿದ್ದಾನೆ. ಎಲ್ಲಾ ಬಗೆಯ ಶಾಲೆಗಳು ಕೆಲವು ಮೂಲಭೂತ ಸಮಾನ ಅಂಶಗಳನ್ನು ಹೊಂದಿವೆಯೋ ಎಂಬುದನ್ನು ತಿಳಿಸುತ್ತದೆ. ಇದು ಸಾರ್ವತ್ರೀಕರಣಕ್ಕೆ ತೆಗೆದುಕೊಂಡು ಹೋಗುತ್ತದೆ. ಸರ್ವರಿಗೂ ಸಮಾನ ಶಿಕ್ಷಣ ಎಂದರೆ ದೇಶದ ಪ್ರತಿ ಮೂಲೆ ಮೂಲೆಯಲ್ಲಿ ಶಾಲೆಗಳನ್ನು ತೆಗೆಯುವುದು ಎಂದರ್ಥ ವಾಗಿರದೆ ಮಕ್ಕಳಿಗೆ ಸಮಾನ ಅವಕಾಶಗಳನ್ನು ಕಲ್ಪಿಸಿಕೊಡುವುದೂ ಆಗಿದೆ. ಇದರ ಅನ್ವಯ ಪ್ರಾಥಮಿಕ ಶಾಲಾ ಹಂತದಲ್ಲಿ ಈ ಮೇಲಿನ ಅಂಶವನ್ನು ಈಡೇರಿಸಲು ರಾಷ್ಟ್ರ ಕೆಲವು ಮೂಲ ಉದ್ದೇಶಗಳನ್ನು ಹಂತ ಹಂತ ರೀತಿಯಲ್ಲಿ ರೂಪಿಸಲಾಯಿತು. ಶಿಕ್ಷಣದ ಸಾರ್ವತ್ರೀಕರಣಕ್ಕೆ ಕನಿಷ್ಠಮಟ್ಟಗಳನ್ನು ಅಳವಡಿಸಿ ಮಕ್ಕಳ ಸಾಧನೆಯ ಆಧಾರದ ಮೇಲೆ ನಿರ್ಧರಿಸಲಾಯಿತು.

## ೧. ೬. ಜಿಲ್ಲಾ ಪ್ರಾಥಮಿಕ ಶಿಕ್ಷಣ ಕಾರ್ಯಕ್ರಮ

**ಹಿನ್ನೆಲೆ :** ಪ್ರಜಾಪ್ರಭುತ್ವದ ಯಶಸ್ಸಿಗೆ ಶಿಕ್ಷಣ ಅತ್ಯವಶ್ಯಕ. ಸಂವಿಧಾನದ ನಿರ್ದೇಶಕ ತತ್ವಗಳ ರೀತ್ಯಾ ೬-೧೪ ವಯೋಮಿತಿಯ ಎಲ್ಲಾ ಮಕ್ಕಳಿಗೆ ಸಾಕಷ್ಟು ಶಿಕ್ಷಣ ಸೌಲಭ್ಯಗಳನ್ನು ಒದಗಿಸಲು ಸರ್ಕಾರ ಬದ್ಧವಾಗಿದೆ. ೧೯೮೬ರ ರಾಷ್ಟ್ರೀಯ ಶಿಕ್ಷಣ ನೀತಿ ೧೯೯೨ರಲ್ಲಿ ಪುನರ್‌ವಿಮರ್ಶಿಸಲ್ಪಟ್ಟಿತು. ಅಲ್ಲದೆ ಇದರ ಅನುಷ್ಠಾನಕ್ಕಾಗಿ ೧೯೯೨ರಲ್ಲಿ

ಕ್ರಿಯಾ ಯೋಜನೆಯನ್ನು ರೂಪಿಸಲಾಯಿತು. ಅದರಂತೆ ಕ್ರಿ.ಶ.೨೦೦೦ದ ವೇಳೆಗೆ ಪ್ರಾಥಮಿಕ ಶಿಕ್ಷಣವನ್ನು ಸಾರ್ವತ್ರೀಕರಣಗೊಳಿಸಿ ಮಕ್ಕಳ ಕಲಿಕೆಯ ಗುಣಮಟ್ಟವನ್ನು ಉತ್ತಮಪಡಿಸುವುದು ನಮ್ಮ ಮುಂದಿರುವ ಗುರಿ. ಈ ಗುರಿ ಸಾಧನೆಗಾಗಿ ಹಮ್ಮಿಕೊಳ್ಳಲಾದ ವಿಶಿಷ್ಟ ಯೋಜನೆ ಜಿಲ್ಲಾ ಪ್ರಾಥಮಿಕ ಶಿಕ್ಷಣ ಯೋಜನೆ (ಜಿಲ್ಲಾ ಪ್ರಾಥಮಿಕ ಶಿಕ್ಷಣ ಕಾರ್ಯಕ್ರಮ).

ಯೋಜನಾ ಪೂರ್ವದಲ್ಲಿ,

೧. ಪ್ರಾಥಮಿಕ ಶಾಲೆಗಳ ಆಂತರಿಕ ಮತ್ತು ಬಾಹ್ಯ ಗುಣಮಟ್ಟ
೨. ಹೆಣ್ಣು ಮಕ್ಕಳ ಶಿಕ್ಷಣ
೩. ಗಿರಿಜನರ ಶಿಕ್ಷಣ
೪. ಶಿಕ್ಷಕ ತರಬೇತಿಯ ಗುಣಮಟ್ಟ
೫. ಪಠ್ಯಪುಸ್ತಕಗಳ ವಿನ್ಯಾಸ ಮತ್ತು ಗುಣಮಟ್ಟ

ಈ ವಿಷಯಗಳ ಬಗ್ಗೆ ಅಧ್ಯಯನವನ್ನು ಕೈಗೊಳ್ಳಲಾಯಿತು. ಈ ಅಧ್ಯಯನಗಳ ಆಧಾರದ ಮೇಲೆ ವಿಶ್ವ ಬ್ಯಾಂಕಿನ ಸಾಲದ ನೆರವಿನಿಂದ ೧೯೯೪-೯೫ನೇ ಸಾಲಿನಲ್ಲಿ ರಾಷ್ಟ್ರದ ಏಳು ಪ್ರಾಂತ್ಯಗಳ ೪೨ ಜಿಲ್ಲೆಗಳಲ್ಲಿ ಈ ಯೋಜನೆಯನ್ನು ಕೈಗೆತ್ತಿಕೊಳ್ಳಲಾಯಿತು.

## ೧. ೭. ಶಾಲೆ ಮತ್ತು ಸಮುದಾಯ

**ಕರ್ನಾಟಕ ರಾಜ್ಯದ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢಶಾಲೆಗಳಲ್ಲಿ ಶಾಲಾ ಅಭಿವೃದ್ಧಿ ಹಾಗೂ ಮೇಲುಸ್ತುವಾರಿ ಸಮಿತಿ (ಎಸ್.ಡಿ.ಎಂ.ಸಿ.)ಗಳ ರಚನೆ**

### ೧. ಪ್ರಸ್ತಾವನೆ

ಮೇಲೆ ಓದಲಾದ ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತರ ಪ್ರಸ್ತಾವನೆಯಲ್ಲಿ ಡಾ. ರಾಜಾ ರಾಮಣ್ಣನವರ ಅಧ್ಯಕ್ಷತೆಯ ಕಾರ್ಯತಂಡದ ಮಧ್ಯಂತರ ವರದಿಯ ಶಿಫಾರಸ್ಸಿನಂತೆ ಕರ್ನಾಟಕ ರಾಜ್ಯದ ಶಾಲಾ ಶಿಕ್ಷಣದಲ್ಲಿ ಗುಣಾತ್ಮಕ ಬದಲಾವಣೆ ತರಲು ಹಾಗೂ ಶಾಲಾ ಆಡಳಿತದಲ್ಲಿ ಸಮುದಾಯದ ಸಕ್ರಿಯ ಪಾತ್ರವನ್ನು ಖಚಿತ ಪಡಿಸಲು ಹಾಗೂ ತತ್ಸಂಬಂಧಿಯಾದ ವಿಷಯಗಳನ್ನು ಕುರಿತು ಶಿಕ್ಷಣ ಕಾಯ್ದೆಗೆ ತಿದ್ದುಪಡಿಯನ್ನು ಸೂಚಿಸಲಾಗಿದೆ.

೨. ಈ ಕೆಳಗಿನ ಕಾರಣಗಳಿಗಾಗಿ ಈ ತಿದ್ದುಪಡಿಯು ಅವಶ್ಯವಾಗಿದೆ

೧. ರಾಷ್ಟ್ರೀಯ ಶಿಕ್ಷಣ ನೀತಿಯನ್ವಯ ಪ್ರಾಥಮಿಕ ಶಿಕ್ಷಣದ ಸಾರ್ವತ್ರೀಕರಣವನ್ನು ಸಾಧಿಸುವುದು.

೨. ಶಾಲೆಗಳು ಪರಿಣಾಮಕಾರಿಯಾಗಿ ಕೆಲಸ ಮಾಡುವುದನ್ನು ಖಚಿತಪಡಿಸಿಕೊಳ್ಳುವುದು.

೩. ತಮ್ಮ ಮಕ್ಕಳ ಏಳಿಗೆಯ ಬಗ್ಗೆ ಸದಾ ಕಾಳಜಿಯುಳ್ಳ ಪೋಷಕರು/ಪಾಲಕರು ಶಿಕ್ಷಣ ಪ್ರಕ್ರಿಯೆಯಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವಂತೆ ಮಾಡುವುದು.

೪. ಶಿಕ್ಷಣ ವ್ಯವಸ್ಥೆಯನ್ನು ವಿಕೇಂದ್ರೀಕರಿಸಿ ಆಡಳಿತವನ್ನು ಸುಧಾರಿಸುವುದು.

೫. ಶಿಕ್ಷಕರನ್ನು ಪ್ರೇರೇಪಿಸಿ ಅವರ ಜವಾಬ್ದಾರಿಯನ್ನು ಹೆಚ್ಚಿಸುವುದು.

೬. ಗ್ರಾಮ ಶಿಕ್ಷಣ ಸಮಿತಿಗಳ ರಚನೆಯಲ್ಲಿ ಉಳಿದುಕೊಂಡ ನ್ಯೂನತೆಗಳನ್ನು ಹೋಗಲಾಡಿಸುವುದು.

೭. ಶಾಲಾ ಯೋಜನೆ ಹಾಗೂ ಅಭಿವೃದ್ಧಿಗಾಗಿ ಶಾಲೆಯನ್ನೇ ಒಂದು ಘಟಕವನ್ನಾಗಿ ಪರಿಗಣಿಸಿ, ಪ್ರಕಲ್ಪನಾತ್ಮಕ ದಾಖಲೆ (ವಿಜನ್ ಡಾಕ್ಯುಮೆಂಟ್) ತಯಾರಿಸುವುದು.

೮. ದಾಖಲಾತಿ/ಹಾಜರಾತಿ ಶಿಕ್ಷಣ ಗುಣಮಟ್ಟ ಸುಧಾರಣೆ ಕುರಿತಂತೆ ಇರುವ ಸಮಸ್ಯೆಗಳನ್ನು ಪರಿಹರಿಸುವುದು.

೯. ತರಗತಿಯ ಚಟುವಟಿಕೆಗಳನ್ನು ಶಿಸ್ತುಬದ್ಧವಾಗಿ ಸಂಘಟಿಸುವುದು.

೧೦. ಸಂಪನ್ಮೂಲಗಳನ್ನು ಕ್ರೋಢೀಕರಿಸುವುದು.'

ಶಿಕ್ಷಣ ಪ್ರಕ್ರಿಯೆಯಲ್ಲಿ ಸಮುದಾಯದ ಪಾಲ್ಗೊಳ್ಳುವಿಕೆ ಅನಿವಾರ್ಯವಾಗಿದೆ. ಈ ನಿಟ್ಟಿನಲ್ಲಿ ಪ್ರಸ್ತುತ ಅಸ್ತಿತ್ವದಲ್ಲಿರುವ ಶಾಲಾ ಅಭಿವೃದ್ಧಿ ಸಮಿತಿ ಮತ್ತು ಗ್ರಾಮ ಶಿಕ್ಷಣ ಸಮಿತಿಗಳನ್ನು ರದ್ದುಪಡಿಸಿ, ಶಾಲಾ ಮಟ್ಟದಲ್ಲಿ ಶಾಲಾ ಅಭಿವೃದ್ಧಿ ಹಾಗೂ ಮೇಲುಸ್ತುವಾರಿ ಸಮಿತಿ, ಗ್ರಾಮ ಪಂಚಾಯತ್ ಮಟ್ಟದಲ್ಲಿ ಗ್ರಾಮ ಪಂಚಾಯತ್ ಶಿಕ್ಷಣ ಸಮಿತಿ, ತಾಲೂಕು ಮಟ್ಟದಲ್ಲಿ ತಾಲೂಕು ಪಂಚಾಯತ್ ಶಿಕ್ಷಣ ಸಮಿತಿ ಹಾಗೂ ನಗರ ಮಟ್ಟದಲ್ಲಿ ನಗರ

ಸಭೆ/ಕಾರ್ಪೋರೇಷನ್ ಸಮಿತಿಗಳ ರಚನೆಯನ್ನು ಉದ್ದೇಶಿಸಲಾಗಿದೆ. ಕರ್ನಾಟಕ ಶಿಕ್ಷಣ ಕಾಯ್ದೆ ೧೯೮೩ಕ್ಕೆ ತಿದ್ದುಪಡಿ ತರುವ ಪ್ರಕ್ರಿಯೆಯು ಪೂರ್ಣಗೊಳ್ಳಲು ಸಾಕಷ್ಟು ಕಾಲಾವಕಾಶದ ಅವಶ್ಯಕತೆ ಇರುವುದರಿಂದ ಶಾಲಾ ಅಭಿವೃದ್ಧಿ ಹಾಗೂ ಮೇಲುಸ್ತುವಾರಿ ಸಮಿತಿ(ಎಸ್.ಡಿ.ಎಂ.ಸಿ.)ಗಳ ರಚನೆಗೆ ಕಾನೂನು ತಿದ್ದುಪಡಿಗೆ ಪ್ರಕ್ರಿಯೆ ಪ್ರಾರಂಭಿಸುವುದರೊಂದಿಗೆ ಸರ್ಕಾರದ ಕಾರ್ಯಕಾರಿ ಆದೇಶವನ್ನು ಹೊರಡಿಸುವಂತೆ ಪ್ರಸ್ತಾವನೆಯಲ್ಲಿ ಕೋರಲಾಗಿದೆ. ಕರ್ನಾಟಕ ಶಿಕ್ಷಣ ಕಾಯ್ದೆ ೧೯೮೩ಕ್ಕೆ ತಿದ್ದುಪಡಿ ತರುವ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಪ್ರಕ್ರಿಯೆ ಪೂರ್ಣಗೊಳ್ಳಲು ಸಾಕಷ್ಟು ಕಾಲಾವಕಾಶದ ಅವಶ್ಯಕತೆ ಇರುವುದನ್ನು ಸರ್ಕಾರವು ಮನಗಂಡು ಶಾಲಾ ಅಭಿವೃದ್ಧಿ ಹಾಗೂ ಮೇಲುಸ್ತುವಾರಿ ಸಮಿತಿಗಳ ರಚನೆ ಕುರಿತಂತೆ ಈ ಕೆಳಕಂಡಂತೆ ಆದೇಶಿಸಿದೆ.

**೩. ಸರ್ಕಾರಿ ಆದೇಶ ಸಂಖ್ಯೆ : ಇಡಿ ೧ ಪಿ ಬಿ ಎಸ್ ೨೦೦೧, ಬೆಂಗಳೂರು, ದಿನಾಂಕ : ೨೮.೪.೨೦೦೧**

ಕರ್ನಾಟಕ ರಾಜ್ಯದಲ್ಲಿ ಶಾಲಾ ಶಿಕ್ಷಣದಲ್ಲಿ ಗುಣಾತ್ಮಕ ಬದಲಾವಣೆ ತರಲು ಹಾಗೂ ಶಾಲಾ ಆಡಳಿತದಲ್ಲಿ ಸಮುದಾಯದ ಸಕ್ರಿಯ ಪಾತ್ರವನ್ನು ಖಚಿತಪಡಿಸಲು ರಾಜ್ಯದ ಎಲ್ಲಾ ಸರ್ಕಾರಿ ಪ್ರಾಥಮಿಕ (ಕಿರಿಯಾ ಹಾಗೂ ಹಿರಿಯ ಪ್ರಾಥಮಿಕ ಶಾಲೆಗಳು) ಹಾಗೂ ಪ್ರೌಢಶಾಲೆಗಳಲ್ಲಿ ಶಾಲಾ ಅಭಿವೃದ್ಧಿ ಹಾಗೂ ಮೇಲುಸ್ತುವಾರಿ ಸಮಿತಿ (ಎಸ್.ಡಿ.ಎಂ.ಸಿ.)ಗಳ ರಚನೆಗೆ ಸರ್ಕಾರದ ಅನುಮತಿಯನ್ನು ನೀಡಲಾಗಿದೆ.

**೪. ಶಾಲಾ ಅಭಿವೃದ್ಧಿ ಹಾಗೂ ಮೇಲುಸ್ತುವಾರಿ ಸಮಿತಿ (ಎಸ್.ಡಿ.ಎಂ.ಸಿ.)ಯ ರಚನೆ**

೧. ಶಾಲಾ ಅಭಿವೃದ್ಧಿ ಹಾಗೂ ಮೇಲುಸ್ತುವಾರಿ ಸಮಿತಿಯು ಈ ಕೆಳಕಂಡ ಸದಸ್ಯರನ್ನೊಳಗೊಂಡಿರುತ್ತದೆ.

ಅ. ಪೋಷಕ ಸಭೆಯಿಂದ ೯ ಜನ ಪೋಷಕ ಪ್ರತಿನಿಧಿಗಳನ್ನು ಆಯ್ದುಕೊಳ್ಳಬೇಕು. ಈ ಒಂಭತ್ತು ಜನರಲ್ಲಿ ಕನಿಷ್ಠ ಮೂವರು ಮಹಿಳಾ ಪ್ರತಿನಿಧಿಗಳು ಇರಬೇಕು. ಕನಿಷ್ಠ ಇಬ್ಬರು ಪರಿಶಿಷ್ಟ ಜಾತಿ/ಪಂಗಡಗಳಿಗೆ ಸೇರಿದವರಾಗಿರಬೇಕು. ಒಬ್ಬರು ಅಲ್ಪಸಂಖ್ಯಾತ ವರ್ಗಕ್ಕೆ ಸೇರಿದವರಾಗಿರಬೇಕು.

ಯಾವುದೇ ಪೋಷಕರು ಏಕಕಾಲಕ್ಕೆ ಒಂದಕ್ಕಿಂತ ಹೆಚ್ಚು ಶಾಲಾ ಅಭಿವೃದ್ಧಿ ಹಾಗೂ ಮೇಲುಸ್ತುವಾರಿ ಸಮಿತಿಗಳ ಸದಸ್ಯರಾಗಿರಕೂಡದು. ಒಂದು ವೇಳೆ ಪರಿಶಿಷ್ಠ ಜಾತಿ/ಪರಿಶಿಷ್ಠ ಪಂಗಡ/ಅಲ್ಪಸಂಖ್ಯಾತ ಪ್ರತಿನಿಧಿಗಳು ಲಭ್ಯವಿಲ್ಲದಿದ್ದಲ್ಲಿ ಇತರರಿಂದ ಭರ್ತಿ ಮಾಡುವುದು. ೩ ವರ್ಷದ ಒಳಗೆ ಮುಂದೆ ಈ ವರ್ಗದ ಮಕ್ಕಳು ದಾಖಲಾದಲ್ಲಿ ಅಂತಹ ಪೋಷಕರನ್ನು ಗಮನಿಸಿ ಮುಂದೆ ಉದ್ಭವಿಸುವ ಸ್ಥಾನಗಳಿಗೆ ಆದ್ಯತೆಯ ಮೇರೆಗೆ ಭರ್ತಿ ಮಾಡುವುದು.

ಆ. ಈ ಕೆಳಗಿನವರು ಪದನಿಮಿತ್ತ ಸದಸ್ಯರಾಗಿರಬೇಕು.

i) ಆ ಕ್ಷೇತ್ರವನ್ನು ಪ್ರತಿನಿಧಿಸುವ ಗ್ರಾಮ ಪಂಚಾಯತ್, ತಾಲೂಕು ಪಂಚಾಯತ್ ಹಾಗೂ ಜಿಲ್ಲಾ ಪಂಚಾಯತ್ ಸದಸ್ಯರು.

ii) ಅಂಗನವಾಡಿ ಇದ್ದಲ್ಲಿ ಅದರ ಶಿಕ್ಷಕಿಯೊಬ್ಬರು.

iii) ಆ ಕ್ಷೇತ್ರಕ್ಕೆ ಸಂಬಂಧಿಸಿದ ಪ್ರಾಥಮಿಕ ಆರೋಗ್ಯ ಕಾರ್ಯಕರ್ತರು.

iv) ಆ ಶಾಲೆಯ ಮುಖ್ಯ ಗುರುಗಳು.

ಇ. ಈ ಕೆಳಗಿನವರು ಶಾಲಾ ಅಭಿವೃದ್ಧಿ ಹಾಗೂ ಮೇಲುಸ್ತುವಾರಿ ಸಮಿತಿಗೆ ನಾಮನಿರ್ದೇಶಿತ ಸದಸ್ಯರಾಗಿರಬೇಕು.

i) ಶಾಲೆಯನ್ನು ದತ್ತು ತೆಗೆದುಕೊಂಡ ಮಹನೀಯರು.

ii) ಶಾಲೆ ಕಟ್ಟಲು ಭೂಮಿ ದಾನ ಮಾಡಿದ ದಾನಿಗಳು, ಶಾಲಾ ಕಟ್ಟಡವನ್ನು ಕಟ್ಟಿಸಿಕೊಟ್ಟ ಮಹನೀಯರು ಮತ್ತು ರೂಪಾಯಿ ೧೦,೦೦೦-೦೦ ಅಥವಾ ಅದಕ್ಕಿಂತ ಹೆಚ್ಚಿನ ಮೌಲ್ಯದ ಶೈಕ್ಷಣಿಕ ಉಪಕರಣಗಳನ್ನು ಕೊಡಿಸಿದ ಮಹನೀಯರು ಅಥವಾ ರೂಪಾಯಿ ೧೦,೦೦೦-೦೦ ಅಥವಾ ಅದಕ್ಕಿಂತ ಹೆಚ್ಚಿನ ಮೊತ್ತವನ್ನು ದಾನ ಮಾಡಿದ ದಾನಿಗಳು.

iii) ಆ ಕ್ಷೇತ್ರದಲ್ಲಿ ವಾಸಿಸುವ ಒಬ್ಬ ಶಿಕ್ಷಣ ತಜ್ಞರು ಅಥವಾ ಒಬ್ಬ ನಿವೃತ್ತ ಶಿಕ್ಷಕರು.

iv) ಸ್ಥಳೀಯ ಸ್ವಯಂ ಸೇವಾ ಸಂಸ್ಥೆಗಳ ಇಬ್ಬರು ಸದಸ್ಯರು.

v) ಯುವಕ ಸಂಘ ಅಥವಾ ಯುವತಿ ಸಂಘದ ಒಬ್ಬ ಪದಾಧಿಕಾರಿಗಳು.

vi) ಏಳನೇ ವರ್ಗದ ಅಥವಾ ಹತ್ತನೇ ವರ್ಗದ ಒಬ್ಬ ವಿದ್ಯಾರ್ಥಿ/ವಿದ್ಯಾರ್ಥಿನಿ ನಾಮ ನಿರ್ದೇಶನಗೊಂಡ ಸದಸ್ಯರಿಗೆ ಮತದಾನದ ಹಕ್ಕು ಇರುವುದಿಲ್ಲ.

**೨. ಶಾಲಾ ಅಭಿವೃದ್ಧಿ ಹಾಗೂ ಮೇಲುಸ್ತುವಾರಿ ಸಮಿತಿಯ ಕಾಲಾವಧಿ**

ಶಾಲಾ ಅಭಿವೃದ್ಧಿ ಹಾಗೂ ಮೇಲುಸ್ತುವಾರಿ ಸಮಿತಿಯ ಕಾಲಾವಧಿಯು ಮೂರು ವರ್ಷಗಳದ್ದಾಗಿರುತ್ತದೆ.

**೩. ಸ್ಥಾಯಿ ಸಮಿತಿಗಳ ರಚನೆ**

ಶಾಲಾ ಅಭಿವೃದ್ಧಿ ಹಾಗೂ ಮೇಲುಸ್ತುವಾರಿ ಸಮಿತಿಯು ಬೇರೆ ಬೇರೆ ವಿಷಯ ಸಮಿತಿಗಳನ್ನು ಸ್ಥಾಯಿ ಸಮಿತಿಗಳಾಗಿ ರಚಿಸಿಕೊಳ್ಳಬಹುದು. ಅವಶ್ಯಕತೆಗನುಗುಣವಾಗಿ ಅದು ಪ್ರತಿಯೊಂದು ಸ್ಥಾಯಿ ಸಮಿತಿಗೂ ಗೌರವ ಸದಸ್ಯರನ್ನು ನಾಮನಿರ್ದೇಶನ ಮಾಡಬಹುದು. ಶಾಲಾ ಅಭಿವೃದ್ಧಿ ಹಾಗೂ ಮೇಲುಸ್ತುವಾರಿ ಸಮಿತಿಯು ಈ ಕೆಳಕಂಡಂತೆ ಸ್ಥಾಯಿ ಸಮಿತಿಗಳನ್ನು ರಚಿಸಿಕೊಳ್ಳಬಹುದು.

* ಅಭಿವೃದ್ಧಿ ಸಮಿತಿ
* ಮೇಲುಸ್ತುವಾರಿ ಸಮಿತಿ
* ಶಾಲಾ ಅಭಿವೃದ್ಧಿ ಹಾಗೂ ಮೇಲುಸ್ತುವಾರಿ ಸಮಿತಿಯು ಬೇರೆ ಯಾವುದೇ ಸಮಿತಿಯನ್ನು ರಚಿಸಬಹುದು

**೪. ಶಾಲಾ ಅಭಿವೃದ್ಧಿ ಹಾಗೂ ಮೇಲುಸ್ತುವಾರಿ ಸಮಿತಿಯ ಅಧಿಕಾರಗಳು**

* ಶಾಲೆಯು ಸರಿಯಾಗಿ ಕೆಲಸ ಮಾಡುವುದನ್ನು ಖಾತರಿಪಡಿಸಿಕೊಳ್ಳುವುದು. ಶಿಕ್ಷಕ ಸಿಬ್ಬಂದಿಯ ಸಕಾಲಿಕ ಹಾಗೂ ನಿಯಮಿತ ಹಾಜರಾತಿಯ ಮೇಲೆ ಗಮನವಿಡುವುದು. ಸದಸ್ಯರು ಶಿಕ್ಷಕರ ಹಾಜರಾತಿ ವಹಿಯನ್ನು ಶಾಲೆಯಲ್ಲಿಯೇ ಪರಿವೀಕ್ಷಿಸಬಹುದು.
* ಶಿಕ್ಷಕ ಸಿಬ್ಬಂದಿಯ ಸಕಾಲಿಕ ಹಾಗೂ ನಿಯಮಿತ ಹಾಜರಾತಿಯಲ್ಲಿ ಏನಾದರೂ ದೋಷ ಕಂಡುಬಂದರೆ, ಈ ಬಗ್ಗೆ ಮಾಸಿಕ ಸಭೆಯಲ್ಲಿ ಚರ್ಚಿಸಿ, ಗೊತ್ತುವಳಿ ಪಾಸು ಮಾಡಿ ಸೂಕ್ತ ಕ್ರಮಕ್ಕೆ ಮೇಲಧಿಕಾರಿಗಳಿಗೆ ವರದಿ ಸಲ್ಲಿಸುವುದು. ಮೇಲಧಿಕಾರಿಗಳು ಈ ಬಗ್ಗೆ ತೆಗೆದುಕೊಂಡ ಕ್ರಮದ ಕುರಿತು ಗೊತ್ತುವಳಿ ಸ್ವೀಕರಿಸಿದ ೩೦ ದಿನಗಳೊಳಗೆ ಶಾಲಾ ಅಭಿವೃದ್ಧಿ ಹಾಗೂ ಮೇಲುಸ್ತುವಾರಿ ಸಮಿತಿಗೆ ತಿಳಿಸಬೇಕು.

* ಕಿರಿಯ ಮತ್ತು ಹಿರಿಯ ಪ್ರಾಥಮಿಕ ಹಾಗೂ ಪ್ರೌಢಶಾಲಾ ಮುಖ್ಯ ಶಿಕ್ಷಕರುಗಳಿಗೆ ಸಾಂದರ್ಭಿಕ ಹಾಗೂ ನಿರ್ಬಂಧಿತ ರಜೆ ಮಂಜೂರು ಮಾಡುವ ಅಧಿಕಾರವು ಶಾಲಾ ಅಭಿವೃದ್ಧಿ ಹಾಗೂ ಮೇಲುಸ್ತುವಾರಿ ಸಮಿತಿಯ ಅಧ್ಯಕ್ಷರಿಗೆ ಇರುತ್ತದೆ.

* ಒಂದು ವರ್ಷದಲ್ಲಿ ನಾಲ್ಕಕ್ಕೆ ಮೀರದಂತೆ ಸ್ಥಳೀಯ ರಜೆಗಳನ್ನು ನಿರ್ಧರಿಸುವುದು.

* ನಿರುಪಯುಕ್ತವಾದ ವಿಜ್ಞಾನೋಪಕರಣಗಳು, ಕಲಿಕೆಯ ಸಾಧನಗಳು, ಪೀಠೋಪಕರಣಗಳು, ಆಟದ ಸಾಮಗ್ರಿಗಳು, ನಕಾಶೆಗಳು, ಭೂಪಟಗಳು, ವಾಚನಾಲಯದ ಪುಸ್ತಕಗಳು ಇತ್ಯಾದಿ ಎಲ್ಲಾ ಸಾಮಗ್ರಿಗಳು ಸೇರಿ ಗರಿಷ್ಠ ಕಿರಿಯ ಪ್ರಾಥಮಿಕ ಶಾಲೆಗಳಿಗೆ ವಾರ್ಷಿಕ ರೂ. ೨೦೦೦.೦೦, ಹಿರಿಯ ಪ್ರಾಥಮಿಕ ಶಾಲೆಗಳಿಗೆ ವಾರ್ಷಿಕ ರೂ. ೫೦೦೦.೦೦ ಮತ್ತು ಪ್ರೌಢಶಾಲೆಗಳಿಗೆ ವಾರ್ಷಿಕ ರೂ. ೧೦೦೦೦.೦೦ದ ಮಿತಿಯಲ್ಲಿ ನಿರುಪಯುಕ್ತವೆಂದು ಘೋಷಿಸುವುದು. ಹೀಗೆ ಘೋಷಿಸಿದ ಪೀಠೋಪಕರಣಗಳನ್ನು ಹರಾಜು ಮಾಡಿ ಬಂದ ಹಣವನ್ನು ಶಾಲೆಯ ಶಿಕ್ಷಣ ನಿಧಿಗೆ ಜಮಾ ಮಾಡುವುದು.

* ಸಾಂಸ್ಕೃತಿಕ ಚಟುವಟಿಕೆಗಳು, ಆಟೋಟ ಸ್ಪರ್ಧೆಗಳು, ರಾಜ್ಯದೊಳಗಿನ ಶೈಕ್ಷಣಿಕ ಪ್ರವಾಸಗಳು, ಬೇರೆ ರೀತಿಯ ಸಂದರ್ಶನಗಳು ಇತ್ಯಾದಿಗಳನ್ನು ಸಂಘಟಿಸಲು ಅನುಮತಿ ನೀಡುವುದು.

* ಶಾಲೆಯು ದಾನವಾಗಿ ಸ್ವೀಕರಿಸಿದ ಹಾಗೂ ಖರ್ಚು ಮಾಡಿದ ಹಣದ ಲೆಕ್ಕಪತ್ರಗಳನ್ನು ಹಾಗೂ ತತ್ಸಂಬಂಧಿಯಾದ ದಾಖಲೆಗಳನ್ನು ಪರೀಕ್ಷಿಸುವುದು.

* ಶಾಲೆಯ ಜಮೀನಿನಲ್ಲಿ ಬೆಳೆದ ಬೆಳೆಗಳನ್ನು ನಿಯಮಿತವಾಗಿ ಹರಾಜು ಮಾಡಿ ಬಂದ ಹಣವನ್ನು ಶಾಲೆಯ ಶಿಕ್ಷಣ ನಿಧಿಗೆ ಜಮಾ ಮಾಡುವುದು.

* ವಾಚನಾಲಯ ನಿಧಿ, ಕ್ರೀಡಾ ನಿಧಿ, ಪ್ರಯೋಗಾಲಯ ನಿಧಿ ಇತ್ಯಾದಿ ಸರ್ಕಾರೇತರ ನಿಧಿಗಳ ಅನುಮೋದನೆಯನ್ನು ನಿಯಮಾನುಸಾರ ನೀಡುವುದು.

* ತಾಲೂಕು ಪಂಚಾಯತ್, ಜಿಲ್ಲಾ ಪಂಚಾಯತ್ ರಾಜ್ಯ ವಲಯ ಮತ್ತು ಕೇಂದ್ರ ವಲಯದಿಂದ ಬಿಡುಗಡೆಯಾಗುವ ಹಣದಲ್ಲಿ ಆ ಶಾಲೆಗೆ ಬೇಕಾಗುವ ಸಾಧನ ಸಾಮಗ್ರಿಗಳನ್ನು ಕೊಂಡುಕೊಳ್ಳುವ ಅಧಿಕಾರ ಹೊಂದಿರುತ್ತದೆ.

## ೫. ಶಾಲಾ ಅಭಿವೃದ್ಧಿ ಹಾಗೂ ಮೇಲುಸ್ತುವಾರಿ ಸಮಿತಿಯ ಕರ್ತವ್ಯಗಳು

i) ಶಾಲೆಯ ವ್ಯಾಪ್ತಿಯಲ್ಲಿನ ಶಾಲೆಯಿಂದ ಹೊರಗುಳಿದ ಎಲ್ಲಾ ಮಕ್ಕಳನ್ನು ಶಾಲೆಗೆ ದಾಖಲು ಮಾಡುವಂತೆ ಪೋಷಕರಲ್ಲಿ ಅರಿವು ಮೂಡಿಸುವುದು ಹಾಗೂ ಆ ರೀತಿ ದಾಖಲಾದ ಮಕ್ಕಳನ್ನು ನಿಯಮಿತವಾಗಿ ಶಾಲೆಗೆ ಕಳುಹಿಸುವಂತೆ ಮಾಡುವುದು.

ii) ಶಾಲೆಯ ವ್ಯಾಪ್ತಿಯಲ್ಲಿರುವ, ಶಾಲೆಯಿಂದ ಹೊರಗುಳಿದ ಮಕ್ಕಳನ್ನು ಶಾಲೆಗೆ ಬರುವಂತೆ ಮಾಡಲು ದಾಖಲಾತಿ ಆಂದೋಲನ, ಬುನಾದಿ ತರಬೇತಿ, ಚಿಣ್ಣರ ಅಂಗಳ ಇತ್ಯಾದಿ ಕಾರ್ಯಕ್ರಮಗಳನ್ನು ಆಯೋಜಿಸುವುದು. ಶಾಲೆಯಿಂದ ಹೊರಗುಳಿದ ಮಕ್ಕಳ ಯಾದಿಯನ್ನು ತಯಾರಿಸಿ ಸಾರ್ವಜನಿಕ ಸ್ಥಳಗಳಾದ ಶಾಲೆ, ಚಾವಡಿ, ಗ್ರಾಮ ಪಂಚಾಯತಿ ಸಮುದಾಯ ಭವನ ಇತ್ಯಾದಿಗಳಲ್ಲಿ ಪ್ರಸಿದ್ಧಪಡಿಸುವುದು.

iii) ಶಾಲೆಯಲ್ಲಿ ಓದುವ ಎಲ್ಲಾ ಮಕ್ಕಳು ನಿರ್ದಿಷ್ಟ ಗುಣಮಟ್ಟದ ಕಲಿಕೆ ಪಡೆಯಲು ಬೇಕಾದ ಕ್ರಮಗಳನ್ನು ತೆಗೆದುಕೊಳ್ಳುವುದು.

iv) ಶಾಲೆಯ ಆವರಣವನ್ನು ಹಾಗೂ ಕಟ್ಟಡವನ್ನು ಅತಿಕ್ರಮಣ ಹಾಗೂ ವಿನಾಶಕಗಳಿಂದ ಕಾಪಾಡುವುದು.

v) ವೇಳಾಪಟ್ಟಿಯಂತೆ ಪ್ರತಿ ವರ್ಷ ೨೨೦ ಕಲಿಕಾ ದಿನಗಳು ಮತ್ತು ಪ್ರತಿ ದಿನ ಐದೂವರೆ ಗಂಟೆಗಳು ಶಾಲೆ ನಡೆಯುವುದನ್ನು ಖಾತರಿ ಪಡಿಸಿಕೊಳ್ಳುವುದು.

vi) ವರ್ಷದಲ್ಲಿ ಮೂರು ಸಲ ಅಂದರೆ ಜುಲೈ, ನವೆಂಬರ್ ಹಾಗೂ ಫೆಬ್ರುವರಿ ಈ ತಿಂಗಳ ಪೋಷಕರ ಸಭೆಗಳನ್ನು ಆಯೋಜಿಸುವುದು.

vii) ಶಾಲಾ ಶಿಕ್ಷಣ ನಿಧಿ ಸ್ಥಾಪಿಸುವುದು.

ಶಾಲಾ ಅಭಿವೃದ್ಧಿಗಾಗಿ ಶಾಲಾ ಅಭಿವೃದ್ಧಿ ಹಾಗೂ ಮೇಲುಸ್ತುವಾರಿ ಸಮಿತಿಯು ಸಾರ್ವಜನಿಕರಿಂದ ವಂತಿಗೆಗಳನ್ನು ದಾನವನ್ನು ಸ್ವೀಕರಿಸಬಹುದು. ಸಮಿತಿಯ ಹೆಸರಿನಲ್ಲಿ ಬ್ಯಾಂಕಿನಲ್ಲಿ ಒಂದು ಖಾತೆ ತೆರೆದು ಅಧ್ಯಕ್ಷರು ಹಾಗೂ ಕಾರ್ಯದರ್ಶಿಗಳು ಜಂಟಿಯಾಗಿ ಆ ಖಾತೆಯನ್ನು ನಿರ್ವಹಿಸುವ ಕೆಳಕಾಣಿಸಿದ ಎಲ್ಲಾ ಹಣವನ್ನು ಈ ಖಾತೆಗೆ ಜಮಾ ಮಾಡುವುದು.

ಅ. ಶಾಲೆಯ ಸೌಲ್ಯಭ್ಯಗಳಿಗಾಗಿ ಸರ್ಕಾರದಿಂದ ಅಥವಾ ಸಂಘ ಸಂಸ್ಥೆಗಳಿಂದ ಕೊಟ್ಟ ಹಣ.

ಆ. ಶಾಲೆಗೆ ಕೊಡಲ್ಪಟ್ಟ ಸಾದಿಲ್ವಾರು ಹಣ.

ಈ. ಶಾಲಾ ಅಭಿವೃದ್ಧಿಗಾಗಿ ದಾನಿಗಳು ಕೊಟ್ಟ ಹಣ.

viii) ಗ್ರಾಮ ಪಂಚಾಯತ್ ಅಥವಾ ತಾಲೂಕು ಪಂಚಾಯತಿಯ ತಾಂತ್ರಿಕ ಸಹಾಯ ಸಲಹೆಗಳೊಂದಿಗೆ ಶಾಲೆಯ ಕಟ್ಟಡ ನಿರ್ಮಾಣ. ಹೆಚ್ಚುವರಿ ನಿರ್ಮಾಣ, ದುರಸ್ತಿ ಕಾರ್ಯಗಳನ್ನು ನೇರವಾಗಿ ಶಾಲಾ ಅಭಿವೃದ್ಧಿ ಹಾಗೂ ಮೇಲುಸ್ತುವಾರಿ ಸಮಿತಿಯೇ ಮಾಡಬೇಕು.

ix) ದಾನಿಗಳನ್ನು ಗುರುತಿಸಿ ಅವರನ್ನು ಸಂಪರ್ಕಿಸಿ, ಶಾಲೆಯನ್ನು ದತ್ತು ತೆಗೆದುಕೊಳ್ಳಲು ಪ್ರೇರೇಪಿಸಬೇಕು.

x) ಶಾಲಾ ಸಂಕೀರ್ಣ ಕಾರ್ಯಕ್ರಮದಲ್ಲಿ ಶಿಕ್ಷಕರು ಸಕ್ರಿಯವಾಗಿ ಭಾಗವಹಿಸುವಂತೆ ಪ್ರೇರೇಪಿಸುವುದು.

xi) ಶಾಲಾ ಮಕ್ಕಳಿಗಾಗಿ ಆರೋಗ್ಯ ಶಿಬಿರವನ್ನು ಏರ್ಪಡಿಸುವುದು ಹಾಗೂ ಅವರಿಗೆ ಆರೋಗ್ಯ ಚೀಟಿಗಳನ್ನು ಕೊಡುವುದು.

xii) ಸರ್ಕಾರದಿಂದ ಕೊಡಲ್ಪಡುವ ಪ್ರೋತ್ಸಾಹದಾಯಕ ಸೌಲಭ್ಯಗಳನ್ನು ವಿದ್ಯಾರ್ಥಿಗಳನ್ನು ಪೋತ್ಸಾಹಿಸುವಂತೆ ನೋಡಿಕೊಳ್ಳುವುದು.

**೬. ಶಾಲಾ ಅಭಿವೃದ್ಧಿ ಹಾಗೂ ಮೇಲುಸ್ತುವಾರಿ ಸಮಿತಿಯ ಅಧ್ಯಕ್ಷರು ಹಾಗೂ ಕಾರ್ಯದರ್ಶಿಗಳು**

* ಒಂಭತ್ತು ಜನ ಪೋಷಕ ಪ್ರತಿನಿಧಿಗಳಿಂದ ಒಬ್ಬರನ್ನು ಶಾಲಾ ಅಭಿವೃದ್ಧಿ ಹಾಗೂ ಮೇಲುಸ್ತುವಾರಿ ಸಮಿತಿಯ ಅಧ್ಯಕ್ಷರೆಂದು ಬಹುಮತದಿಂದ ಆರಿಸುತ್ತದೆ.

* ಆಯಾ ಶಾಲಾ ಅಭಿವೃದ್ಧಿ ಹಾಗೂ ಮೇಲುಸ್ತುವಾರಿ ಸಮಿತಿಯ ಪದನಿಮಿತ್ತ ಸದಸ್ಯರಾದ ಆಯಾ ಶಾಲೆಯ ಮುಖ್ಯ ಗುರುಗಳು ಆಯಾ ಶಾಲಾ ಅಭಿವೃದ್ಧಿ ಹಾಗೂ ಮೇಲುಸ್ತುವಾರಿ ಸಮಿತಿಯ ಸದಸ್ಯ ಕಾರ್ಯದರ್ಶಿ ಹಾಗೂ ಖಜಾಂಚಿಗಳಾಗಿರುತ್ತಾರೆ.

**೭. ಸಭೆ ನಡೆಸುವುದು :** ಸಭೆ ನಡೆಸಲು ಪೋಷಕ ಪ್ರತಿನಿಧಿಗಳಲ್ಲಿ ಮೂರನೇ ಎರಡು ಭಾಗದಷ್ಟು ಹಾಜರಾತಿ ಕಡ್ಡಾಯವಾಗಿರುತ್ತದೆ.

**೮. ಪೋಷಕರ ಸಭೆಯ ರಚನೆ :** ಪ್ರತಿಯೊಂದು ಶಾಲೆಗೂ ಒಂದು ಪೋಷಕದ ಸಭೆ ಇರುತ್ತದೆ. ಮುಖ್ಯ ಗುರುಗಳ ಹತ್ತಿರ ನೋಂದಾಯಿತ ಪೋಷಕರ ಪಟ್ಟಿ ಇರುತ್ತದೆ. (ತಂದೆ ಮತ್ತು ತಾಯಿ ಇಬ್ಬರೂ, ತಂದೆ ತಾಯಿ ಇಲ್ಲದಿದ್ದಲ್ಲಿ ಪೋಷಕರು/ವಾರಸುದಾರರು) ಈ ಪಟ್ಟಿಯನ್ನು ಪರಿವೀಕ್ಷಣೆಗೆ ಇಡಬೇಕು ಹಾಗೂ ಪ್ರಕಟಿಸಬೇಕು.

ಪೋಷಕ ಸಭೆಯ ಕುರಿತಾದ ಸೂಚನೆಯನ್ನು ಶಾಲೆಯ ಫಲಕ ಗ್ರಾಮದ ಚಾವಡಿ ಹಾಗೂ ಸಾರ್ವಜನಿಕ ಸ್ಥಳಗಳಲ್ಲಿ ೧೫ ದಿನಗಳ ಮುಂಚಿತವಾಗಿ ಪ್ರಕಟಿಸತಕ್ಕದ್ದು. ಈ ಸೂಚನೆಯಲ್ಲಿ ಪೋಷಕ ಸಭೆಯು ನಡೆಯುವ ದಿನಾಂಕ ಹಾಗೂ ಸಮಯವನ್ನು ಪ್ರಕಟಿಸತಕ್ಕದ್ದು.

**ಪೋಷಕ ಸಭೆ ನಡೆಸಲು ಗೊತ್ತುಪಡಿಸಿದ ಅಧಿಕಾರಿ :** ಆಯಾ ಮುಖ್ಯ ಶಿಕ್ಷಕರ ಸಮ್ಮುಖದಲ್ಲಿ ಪೋಷಕರ ಸಭೆಯ ರಚನೆ, ಗೊತ್ತುವಳಿ, ಅಂಗೀಕಾರ, ಅಧ್ಯಕ್ಷರ ಅಧಿಕಾರ, ಸ್ವೀಕಾರ ಹಾಗೂ ಪ್ರಥಮ ಸಭೆ ನಡೆಯುತ್ತದೆ.

**ಸಭೆ ನಡೆಯುವಿಕೆ :** ಪ್ರತಿಯೊಂದು ಶಾಲೆಗೂ ಒಂದು ಪೋಷಕರ ಸಭೆ ಇರುತ್ತದೆ. ಮುಖ್ಯ ಗುರುಗಳ ಹತ್ತಿರ ನೋಂದಾಯಿತ ಪೋಷಕರ ಪಟ್ಟಿ ಇರುತ್ತದೆ. ಪ್ರತಿ ವರ್ಷ ಜುಲೈ ತಿಂಗಳಲ್ಲಿ ಆಯಾ ಶಾಲೆಯ ಮುಖ್ಯ ಗುರುಗಳು ಇಂತಹ ನೋಂದಾಯಿತ ಪೋಷಕರ ಸಭೆ ಕೂಡಿಸುತ್ತಾರೆ. ಆ ಸಭೆಯು ಆ ವರ್ಷಕ್ಕೆ ಪೋಷಕ ಸಭೆಯು ರಚಿತವಾಯಿತೆಂಬ ಬಗ್ಗೆ ಗೊತ್ತುವಳಿಯನ್ನು ಅಂಗೀಕರಿಸುತ್ತದೆ. ಪೋಷಕ ಸಭೆಯ ನಂತರ ಇದೇ ಸಭೆಯಲ್ಲಿ ೯ ಜನ ಪೋಷಕ ಪ್ರತಿನಿಧಿಗಳನ್ನು ಆಯ್ಕೆ ಮಾಡಲಾಗುತ್ತದೆ ಅಗತ್ಯವಿದ್ದಲ್ಲಿ ಕೈ ಎತ್ತುವ ಮೂಲಕ ಆಯ್ಕೆ ಮಾಡಲ್ಪಡುತ್ತದೆ.

**ಅಧ್ಯಕ್ಷರ ಆಯ್ಕೆ :** ಪೋಷಕರ ಸಭೆಯ ತಕ್ಷಣ ಈ ಒಂಭತ್ತು ಜನ ಪೋಷಕ ಪ್ರತಿನಿಧಿಗಳು ತಮ್ಮಲ್ಲಿ ಒಬ್ಬರನ್ನು ಅಧ್ಯಕ್ಷರೆಂದು ಆಯ್ಕೆ ಮಾಡುತ್ತಾರೆ. ಆಯಾ ಶಾಲೆಯ ಮುಖ್ಯ ಶಿಕ್ಷಕರು ಶಾಲಾ ಅಭಿವೃದ್ಧಿ ಹಾಗೂ ಮೇಲುಸ್ತುವಾರಿ ಸಮಿತಿಯ ಸದಸ್ಯ ಕಾರ್ಯದರ್ಶಿಗಳಾಗುತ್ತಾರೆ.

**ಶಾಲಾ ಅಭಿವೃದ್ಧಿ ಹಾಗೂ ಮೇಲುಸ್ತುವಾರಿ ಸಮಿತಿಯ ರಚನೆ :** ಅಧ್ಯಕ್ಷರ ಆಯ್ಕೆಯ ನಂತರ ಈ ೯ ಜನ ಪೋಷಕ ಪ್ರತಿನಿಧಿಗಳು ಸೇರಿ ಪದನಿಮಿತ್ತ ಸದಸ್ಯರು ಹಾಗೂ ನಾಮ ನಿರ್ದೇಶನದ ಸದಸ್ಯರನ್ನು ನೇಮಕ ಮಾಡಿ ಶಾಲಾ ಅಭಿವೃದ್ಧಿ ಹಾಗೂ ಮೇಲುಸ್ತುವಾರಿ ಸಮಿತಿಯನ್ನು ರಚಿಸಲು ನಿರ್ಣಯ ಕೈಗೊಳ್ಳಬೇಕು.

**ಶಾಲಾ ಅಭಿವೃದ್ಧಿ ಹಾಗೂ ಮೇಲುಸ್ತುವಾರಿ ಸಮಿತಿಯ ಪ್ರಥಮ ಸಭೆ :** ಶಾಲಾ ಅಭಿವೃದ್ಧಿ ಹಾಗೂ ಮೇಲುಸ್ತುವಾರಿ ಸಮಿತಿಯ ರಚನೆಯಾದ ೭ ದಿನದೊಳಗೆ ಪ್ರಥಮ ಸಭೆಯ ನಿರ್ಣಯ ಹಾಗೂ ಅಧ್ಯಕ್ಷರ ಸೂಚನೆ ಮೇರೆಗೆ ಕರೆಯಬೇಕು. ಈ ಸಭೆಯ ನಂತರ ಪ್ರತೀ ತಿಂಗಳಿಗೂ ಒಮ್ಮೆ ಸಭೆ ಸೇರಿ ಶಾಲೆಯ ಪ್ರಗತಿಯ ಬಗ್ಗೆ ಚರ್ಚಿಸಿ ಕ್ರಮ ಕೈಗೊಳ್ಳಬೇಕು.

ಶಾಲಾ ಅಭಿವೃದ್ಧಿ ಹಾಗೂ ಮೇಲುಸ್ತುವಾರಿ ಸಮಿತಿಯು ರಚನೆಯಾದ ದಿನದಿಂದ ಮೂರು ವರ್ಷಗಳವರೆಗೆ ಅಸ್ತಿತ್ವದಲ್ಲಿರುತ್ತದೆ. ಮೂರು ವರ್ಷದ ನಂತರ ಹೊಸ ಶಾಲಾ ಅಭಿವೃದ್ಧಿ ಹಾಗೂ ಮೇಲುಸ್ತುವಾರಿ ಸಮಿತಿಯ ರಚನೆಗಾಗಿ ಈ ಮೇಲೆ ಹೇಳಿದ ಪ್ರಕ್ರಿಯೆಯಂತೆಯೇ ಕ್ರಮ ಕೈಗೊಳ್ಳತಕ್ಕದ್ದು. ಶಾಲಾ ಅಭಿವೃದ್ಧಿ ಹಾಗೂ ಮೇಲುಸ್ತುವಾರಿ ಸಮಿತಿ ಅವಧಿ ಪೂರ್ಣಗೊಳ್ಳುವ ವರ್ಷದ ಜೂನ್ ತಿಂಗಳಲ್ಲಿಯೇ ಮೇಲಿನ ಪ್ರಕ್ರಿಯೆಯನ್ನು ಪ್ರಾರಂಭಿಸಬೇಕು.

ಪ್ರಗತಿ ಪರಿಶೀಲನೆಗಾಗಿ ಪ್ರತೀ ಶೈಕ್ಷಣಿಕ ವರ್ಷದಲ್ಲಿ ಮೂರು ಬಾರಿ ಅಂದರೆ ಜುಲೈ, ನವೆಂಬರ್ ಹಾಗೂ ಫೆಬ್ರುವರಿ ತಿಂಗಳಿನಲ್ಲಿ ಪೋಷಕ ಸಭೆಯು ಸೇರುತ್ತದೆ. ಪೋಷಕ ಪ್ರತಿನಿಧಿಗಳ/ಪೋಷಕರ ಸದಸ್ಯತ್ವವು ಮಗು ಶಾಲೆಯಲ್ಲಿರುವವರೆಗೆ ಮಾತ್ರ ಅಸ್ತಿತ್ವದಲ್ಲಿರುತ್ತದೆ.

ಪ್ರಾಥಮಿಕ ಶಿಕ್ಷಣದ ಮೇಲೆ ವ್ಯಕ್ತಿಗಳ ಹಾಗೂ ಸಮಾಜದ ಭವಿಷ್ಯ ನಿರ್ಧಾರವಾಗುತ್ತದೆ. ಇಂದಿನ ಹಾಗೂ ಮುಂಬರುವ ದಿನಗಳಲ್ಲಿ ಪ್ರತಿಯೊಂದು ಮಗುವೂ ಕನಿಷ್ಠ ಪಕ್ಷ ನಾಲ್ಕು ವರ್ಷಗಳಾದರೂ ಶಾಲೆ ಅಥವಾ ಅನೌಪಚಾರಿಕ ಕೇಂದ್ರಗಳಲ್ಲಿ ಶಿಕ್ಷಣವನ್ನು ಪಡೆಯದಿದ್ದರೆ ಅವರ ಜೀವನ ಕಷ್ಟಕರವಾಗುತ್ತದೆ. ಆದ್ದರಿಂದ ಪ್ರಾಥಮಿಕ ಶಿಕ್ಷಣ ಪಾತ್ರ ಅತಿ ಮುಖ್ಯ. ಈ ಪರಿಸ್ಥಿತಿಯನ್ನು ಅರ್ಥಮಾಡಿಕೊಳ್ಳದಿದ್ದಲ್ಲಿ ಭಿನ್ನ ಕುಟುಂಬಗಳಿಂದ ಬಂದ ಮಕ್ಕಳು ಬೇರೆ ಬೇರೆ ಮಟ್ಟದ ಶಿಕ್ಷಣ ಪಡೆಯುವಂತಾಗುತ್ತದೆ. ಇದರಿಂದ ಈಗಿರುವ ತಾರತಮ್ಯಗಳೇ ಮುಂದುವರಿದು ಸಮಾನತೆಯ ಅವಕಾಶ ಅಶಿಕ್ಷಿತ ಕುಟುಂಬಗಳ ಮಕ್ಕಳಿಗೆ ಕಡಿಮೆಯಾಗಿ ಅವರು ಹಿಂದುಳಿಯಬೇಕಾಗುತ್ತದೆ. ಹೀಗೆ ಹಿಂದಿನ ಪೀಳಿಗೆಯ ದುರ್ಬಲತೆಗಳಾದ ಅನಕ್ಷರತೆ, ಬಡತನ ಇತ್ಯಾದಿಗಳು ಮುಂದಿನ ಪೀಳಿಗೆಗೂ ವರ್ಗವಾಗುವ ಸಂಭವವಿದೆ. ಇದನ್ನು ಸರಿಪಡಿಸಲು ಪ್ರಾಥಮಿಕ ಶಿಕ್ಷಣದಲ್ಲಿ ಕಲಿಕಾ ಕನಿಷ್ಠ ಹಂತಗಳ ಯೋಜನೆಯು ಅನಿವಾರ್ಯವೆನಿಸಿವೆ.

ಈ ಯೋಜನೆಯನ್ನು ಕಾರ್ಯರೂಪಕ್ಕೆ ತರಲು ಅಖಿಲ ಭಾರತ ಮಟ್ಟದಲ್ಲಿ ಒಂದು ಸಲಹಾ ಸಮಿತಿಯು ಈ ಕೆಳಕಂಡ ಸಲಹೆಗಳನ್ನು ಮಾಡಿದೆ.

ಅ. ಪ್ರಾಥಮಿಕ ಶಿಕ್ಷಣ ಪಡೆದ ವ್ಯಕ್ತಿ ಭಾಷೆ, ಗಣಿತ ಮತ್ತು ಪರಿಸರ ಅಧ್ಯಯನ ವಿಷಯಗಳಲ್ಲಿ ಕೆಲವು ಕನಿಷ್ಠ ಸಾಮರ್ಥ್ಯಗಳನ್ನು ಪಡೆದಿರಬೇಕು.

ಆ. ಸರಾಸರಿ ಮಟ್ಟದ ಚತುರತೆಯನ್ನು ಹೊಂದಿರುವ ಎಲ್ಲಾ ಮಕ್ಕಳು ಈ ಕನಿಷ್ಠ ಸಾಮರ್ಥ್ಯಗಳನ್ನು ಸಾಧಿಸಬೇಕು.

ಮೇಲಿನ ಉದ್ದೇಶ ಸಾಧನೆಗಾಗಿ ನಾವು ಶಿಕ್ಷಕರನ್ನು ಸಜ್ಜುಗೊಳಿಸಬೇಕಾಗಿದೆ. ಇದಕ್ಕಾಗಿ ಶಿಕ್ಷಕರ ಕೈಪಿಡಿಗಳನ್ನು, ಇತರೆ ಬೋಧನಾ ಸಾಮಗ್ರಿಗಳನ್ನು ತಯಾರಿಸಿ ಅವುಗಳನ್ನು ತರಗತಿಗಳಲ್ಲಿ ಉಪಯೋಗಿಸುವಲ್ಲಿ ಶಿಕ್ಷಕರಿಗೆ ಸೂಕ್ತ ತರಬೇತಿಯನ್ನೂ ಸಹ ನೀಡಬೇಕಾಗಿದೆ. ಇದಕ್ಕಾಗಿ ಪ್ರಾಥಮಿಕ ಶಿಕ್ಷಣ 'ಕಲಿಕಾ ಕನಿಷ್ಠ ಹಂತಗಳು' ಎಂಬ ಯೂನಿಸೆಫ್ (UNICEF) ಸಹಾಯಿತ ಯೋಜನೆಯನ್ನು ನಮ್ಮ ಕಛೇರಿಯಲ್ಲಿನ ರಾಜ್ಯ ಮಟ್ಟದ ಸಂಪನ್ಮೂಲ ಘಟಕವು ಹಮ್ಮಿಕೊಂಡಿದೆ. ಈ ಯೋಜನೆಗಾಗಿ ಯೂನಿಸೆಫ್‌ನ ವತಿಯಿಂದ ಈಗಾಗಲೇ ರೂ. ೫೦ ಲಕ್ಷಗಳ ಸಹಾಯಧನ ಬಂದಿದೆ. ಈ ಯೋಜನೆಯ ಪ್ರಥಮ ಹಂತದಲ್ಲಿ ರಾಜ್ಯದ ಎಲ್ಲಾ ಪ್ರಾಥಮಿಕ ಶಾಲಾ ಶಿಕ್ಷಕರು ಸುಲಭವಾಗಿ ಕನಿಷ್ಠ ಕಲಿಕಾ ಹಂತಗಳ ಬಗ್ಗೆ ಆಳವಾದ ಮಾಹಿತಿಯನ್ನು ಪಡೆದು ಕಾರ್ಯೋನ್ಮುಖರಾಗಲು 'ಪ್ರಾಥಮಿಕ ಶಿಕ್ಷಣದಲ್ಲಿ ಕನಿಷ್ಠ ಕಲಿಕಾ ಹಂತಗಳು' ಎಂಬ ಆಂಗ್ಲ ಹೊತ್ತಿಗೆಯನ್ನು ಕನ್ನಡಕ್ಕೆ ಅನುವಾದಿಸಲಾಗಿದೆ. ಈ ಹೊತ್ತಿಗೆಯು ಆಂಗ್ಲ ಆವೃತ್ತಿಯ ಯಥಾವತ್ತಾದ ಅನುವಾದವಾಗದೇ ಎಲ್ಲಾ ಪ್ರಾಥಮಿಕ ಶಿಕ್ಷಕರಿಗೆ ಕನಿಷ್ಠ ಕಲಿಕಾ ಹಂತಗಳು ವಿವಿಧ ದೃಷ್ಟಿಕೋನಗಳನ್ನು ಸರಳವಾಗಿ ಪರಿಚಯಿಸುವ ಪ್ರಾಮಾಣಿಕ ಪ್ರಯತ್ನವಾಗಿದೆ. ಭಾಷೆಯು ಸರಳವಾಗಿದ್ದು ಮೂಲವಸ್ತು ವಿಷಯಕ್ಕೆ ಧಕ್ಕೆಯಾಗದಂತೆ ಎಚ್ಚರಿಕೆ ವಹಿಸಲಾಗಿದೆ. ಇದರಲ್ಲಿ ಹೇಳಲಾದ ಎಲ್ಲಾ ಅಂಶಗಳನ್ನು ಕಾರ್ಯರೂಪಕ್ಕೆ ತರುವ ಹೊಣೆ ಶಿಕ್ಷಕರ ಮೇಲಿದೆ. ಆದ್ದರಿಂದ ಶಿಕ್ಷಕರು, ವಿವಿಧ ಹಂತದ ಶೈಕ್ಷಣಿಕ ಆಡಳಿತಗಾರರು ಮತ್ತು ಸಮುದಾಯದ ಜನರು ಈ ಹೊತ್ತಿಗೆಯನ್ನು ಓದಿ, ಅರ್ಥಮಾಡಿಕೊಂಡು, ಅನುಷ್ಠಾನಗೊಳಿಸಿ, ಕನಿಷ್ಠ ಕಲಿಕಾ ಹಂತಗಳ ಯೋಜನೆಯ ಸಂಪೂರ್ಣ ಯಶಸ್ಸಿಗೆ ಕಾರಣರಾಗುವರೆಂದು ಆಶಿಸಲಾಗಿದೆ.

ಕಲಿಕಾ ಕನಿಷ್ಠ ಹಂತಗಳು ಯೋಜನೆಯನ್ನು ರಾಜ್ಯದ ಶಿಕ್ಷಣ ಇಲಾಖೆಯಲ್ಲಿ ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ರಾಜ್ಯದ ಮಾನ್ಯ ಶಿಕ್ಷಣ ಮಂತ್ರಿಗಳ ಅಧ್ಯಕ್ಷತೆಯಲ್ಲಿ ಒಂದು ರಾಜ್ಯ ಮಟ್ಟದ ಸಲಹಾ ಸಮಿತಿಯನ್ನು ರಚಿಸಲಾಗಿದ್ದು, ಅದರ ಸಲಹೆ ಸೂಚನೆಗಳು ಯೋಜನೆಯ ಅನುಷ್ಠಾನದಲ್ಲಿ ಸಹಾಯಕವಾಗಲಿವೆ.

### ೧. ೮. ಕಲಿಕಾ ಕನಿಷ್ಠ ಹಂತಗಳು

### ೧. ಕೆಲವು ಪ್ರಮುಖ ಲಕ್ಷಣಗಳು

**ಪೀಠಿಕೆ :** ಜಾತಿ, ಸಮುದಾಯ, ಭೌಗೋಳಿಕ ಪರಿಸರ ಅಥವ ಲಿಂಗಭೇಧವಿಲ್ಲದೆ ಎಲ್ಲಾ ಮಕ್ಕಳಿಗೂ ಹೋಲಿಸಬಹುದಾದ ಗುಣಮಟ್ಟದ ಶಿಕ್ಷಣಕ್ಕೆ ಅವಕಾಶವನ್ನು ಕಲ್ಪಿಸಿಕೊಡುವ ಮೂಲಭೂತವಾದ ಉದ್ದೇಶದಿಂದ ಕಲಿಕಾ ಕನಿಷ್ಠ ಹಂತಗಳನ್ನು ರೂಪಿಸಬೇಕಾದ ಅವಶ್ಯಕತೆ ಮೂಡಿಬಂದಿದೆ. ಈ ಕಲಿಕಾ ಕನಿಷ್ಠ ಹಂತಗಳನ್ನು ರೂಪಿಸಿರುವ

ನೀತಿಯ ಮುಖ್ಯ ದೃಷ್ಟಿಯು ಸಮಾನತೆ ಹಾಗೂ ಪ್ರಸ್ತುತ ಶಿಕ್ಷಣರಂಗದಲ್ಲಿರುವ ತಾರತಮ್ಯಗಳನ್ನು ಕಡಿಮೆ ಮಾಡುವುದೇ ಆಗಿದೆ. ರಾಷ್ಟ್ರದಲ್ಲಿ ಶಾಲೆಗೆ ಹೋಗಬೇಕಾಗಿರುವ ಮಕ್ಕಳಲ್ಲಿ ಬಹುಪಾಲು ಮಕ್ಕಳು ವಂಚಿತ ಹಾಗೂ ಅನಾನೂಕೂಲ ಸ್ಥಿತಿಯಲ್ಲಿರುವ ಸಮುದಾಯದ ಮಕ್ಕಳಾಗಿದ್ದಾರೆ. ಇವರಲ್ಲಿ ಬಾಲಕಾರ್ಮಿಕರು, ಶಾಲೆ ತೊರೆದವರು ಮತ್ತು ಬಾಲಕಿಯರು ಸೇರಿದ್ದಾರೆ. ಇವರಿಗೆ ಕೆಲವರ್ಷಗಳವರೆಗೆ ಪ್ರಾಥಮಿಕ ಶಿಕ್ಷಣ ಮಾತ್ರವೇ ವ್ಯವಸ್ಥಿತ ಕಲಿಕೆಗೆ ಇರುವ ಏಕೈಕ ಅವಕಾಶವಾಗಿದೆ. ಆದ್ದರಿಂದ ಈ ಮಕ್ಕಳ ಅಭಿವೃದ್ಧಿಪರ ಅವಶ್ಯಕತೆಗಳನ್ನು ಗಮನದಲ್ಲಿಟ್ಟುಕೊಂಡು ಕಲಿಕಾ ಗುಣಮಟ್ಟದಲ್ಲಿ ಸಮಾನತೆ ಮತ್ತು ಬೆಳವಣಿಗೆಯನ್ನು ಸಂಯೋಜಿಸುವ ಪ್ರಯತ್ನ ಇದಾಗಿದೆ. ಸಮಿತಿಯು ಕನಿಷ್ಠ ಕಲಿಕಾ ಹಂತಗಳನ್ನು ನಿರ್ಧರಿಸುವಾಗ ಮೇಲ್ಕಂಡ ಅಂಶಗಳ ಬಗ್ಗೆ ಕಾಳಜಿಯನ್ನು ಪ್ರಧಾನವಾಗಿ ಪರಿಗಣಿಸಿದೆ.

ಕಲಿಕಾ ಕನಿಷ್ಠ ಹಂತಗಳನ್ನು ಹಲವು ರೀತಿಯಲ್ಲಿ ವಿವರಿಸಬಹುದು. ಉದಾಹರಣೆಗೆ ವೀಕ್ಷಿಸಬಹುದಾದ ಅಂತಿಮ ವರ್ತನೆಗಳೆಂದು ನಿರೂಪಿತವಾಗಿರುವ ನಿರೀಕ್ಷಿತ ಕಲಿಕಾ ಫಲಗಳನ್ನೇ ಕಲಿಕಾ ಕನಿಷ್ಠ ಹಂತಗಳು ಎಂದು ಕರೆಯಬಹುದು. ಕಲಿಕಾ ಉದ್ದೇಶಗಳಾದ ಜ್ಞಾನ, ಗ್ರಹಿಕೆ, ಅನ್ವಯ, ವಿಶ್ಲೇಷಣೆ, ಸಂಶ್ಲೇಷಣೆ ಮತ್ತು ಮೌಲ್ಯಮಾಪನ-ಮುಂತಾದುವುಗಳನ್ನು ನಿರೀಕ್ಷಿತ ಕಲಿಕಾ ಫಲಗಳೆಂದು ಗುರುತಿಸಬಹುದು. ಪ್ರತಿಯೊಂದು ಮಗುವು ಯಾವುದೇ ಒಂದು ತರಗತಿಯ ಅಥವಾ ಶಿಕ್ಷಣ ಹಂತದ ಕೊನೆಯಲ್ಲಿ ಸಾಧಿಸಬಹುದೆಂದು ನಿರೀಕ್ಷಿಸಲಾದ ಕಲಿಕಾ ಸಾಮರ್ಥ್ಯಗಳ ನೈಪುಣ್ಯತೆಯನ್ನು ಸಹ ಕಲಿಕಾ ಕನಿಷ್ಠ ಹಂತಗಳು ಎಂದು ಕರೆಯಬಹುದು. ಈ ವಿವಿಧ ಹೇಳಿಕೆಗಳು ಪರಸ್ಪರ ವಿರುದ್ಧವೇನೂ ಅಲ್ಲ. ಲಭ್ಯವಿರುವ ಹಲವು ಪರ್ಯಾಯಗಳಲ್ಲಿ ಸಮಿತಿಯು ಅಂತಿಮ ಸಾಮರ್ಥ್ಯಗಳನ್ನು ಕಲಿಕಾ ಕನಿಷ್ಠ ಹಂತಗಳಾಗಿ ರೂಪಿಸಿದೆ. ಬೋಧನಾ ವಿಷಯವನ್ನು ಸೇರ್ಪಡೆ ಮಾಡುವಾಗ ಅಥವಾ ಕಲಿಕೆಯ ನಿರ್ದಿಷ್ಟ ವಿಧಾನಗಳನ್ನು ರೂಪಿಸುವಾಗ ಪ್ರತಿಯೊಂದು ಕಲಿಕಾ ಸಾಮರ್ಥ್ಯವನ್ನು ಉಪಸಾಮರ್ಥ್ಯಗಳಾಗಿ ವಿಭಜಿಸಬಹುದು.

ಕಲಿಕಾ ಕನಿಷ್ಠ ಹಂತಗಳು ಒದಗಿಸಲಾದ ಪಠ್ಯವಸ್ತುವಿನ ಪ್ರಮಾಣ ಮತ್ತು ನಿರೀಕ್ಷಿತ ಕಲಿಕಾ ಫಲಗಳ ಸೂಕ್ತತೆಯ ಬಗ್ಗೆ ಮನವರಿಕೆ ಮಾಡಿಕೊಳ್ಳುವ ಒಂದು ತಾರ್ಕಿಕ ಮಾನದಂಡವಾಗಿ ಪ್ರತಿನಿಧಿಸುತ್ತವೆ. ಕಲಿಕಾ ಕನಿಷ್ಠ ಹಂತದ ಗುಂಪಿನಲ್ಲಿ ಯಾವುದನ್ನೂ ಅಂತಿಮ ಎಂದು ಹೇಳಬರುವುದಿಲ್ಲ. ಸಮಿತಿಯ ಅಭಿವೃದ್ಧಿಪಡಿಸಿದ ಕಲಿಕಾ ಕನಿಷ್ಠ ಹಂತಗಳಿಗೂ ಈ ಪರಿಮಿತಿ ಅನ್ವಯವಾಗುತ್ತದೆ. ಕಲಿಕಾ ಕನಿಷ್ಠ ಹಂತಗಳನ್ನು ರೂಪಿಸುವಾಗ ದೃಷ್ಟಿಯಲ್ಲಿಟ್ಟುಕೊಳ್ಳಬೇಕಾದ ಎರಡು ಮೂಲ ಉದ್ದೇಶಗಳನ್ನು ಈ ಕೆಳಗೆ ನೀಡಲಾಗಿದೆ.

೧. ವಿವಿಧ ಬೆಳವಣಿಗೆಯ ಹಂತಗಳಿಗೆ ಸರಿಹೊಂದುವಂತೆ ವಿವಿಧ ತರಗತಿ ಅಥವಾ ಹಂತಗಳಲ್ಲಿ ಇರಬೇಕಾದ ಮಕ್ಕಳ ಜ್ಞಾನವಲಯದ ಸಾಮರ್ಥ್ಯಗಳು.

೨. ಪ್ರಾಥಮಿಕ ಶಿಕ್ಷಣ ಕಾರ್ಯಕ್ರಮಗಳ ರೂಪುರೇಷೆಗಳನ್ನು ನಿರ್ಧರಿಸುವ ಪರಿಸರದ ಸ್ಥಿತಿಗತಿಗಳ ಸಾಕ್ಷ್ಯಾಧಾರಿತ ವಾಸ್ತವತೆ.

ಕನಿಷ್ಠ ಕಲಿಕೆಯ ಹಂತಗಳ ಅರ್ಥವನ್ನು ತಾಂತ್ರಿಕವಾಗಿ ವಿಶ್ಲೇಷಿಸುವ ಪ್ರಯತ್ನವನ್ನು, ಸಮಿತಿಯು ಮಾಡಿಲ್ಲ. ಪ್ರಸ್ತುತ ಅಧ್ಯಾಯವೂ ಕಲಿಕಾ ಕನಿಷ್ಠ ಹಂತಗಳನ್ನು ರೂಪಿಸಲು ಬೇಕಾದ ಅವಶ್ಯಕತೆಗಳ ಬಗ್ಗೆ ಚರ್ಚಿಸುತ್ತದೆ.

**೨. ಕಲಿಕಾ ಕನಿಷ್ಠ ಹಂತಗಳು ಸ್ಪಷ್ಟನೆ : ಗುಣಮಟ್ಟ ಕುರಿತ ವಿಷಯ :** ಮಕ್ಕಳು ಶಿಕ್ಷಣದ ಪ್ರತಿಹಂತದ ಕೊನೆಯಲ್ಲಿ ಏನನ್ನು ಕಲಿಯಬೇಕೆಂದು ಸ್ಪಷ್ಟವಾಗಿ ಒತ್ತು ನೀಡಲಾಗಿದೆಯೋ ಅದು ಪ್ರಮುಖವಾಗಿ ಮೂರು ವಿಷಯ ಗಳನ್ನೊಳಗೊಂಡಿದೆ.

ಮೊದಲನೆಯದಾಗಿ, ಸ್ಪಷ್ಟವಾಗಿ ನಿರೂಪಿತವಾದ ಕಲಿಕಾ ಹಂತಗಳು ಶಿಕ್ಷಣ ವ್ಯವಸ್ಥೆಯಲ್ಲಿ ಕ್ರಮಿಸಬೇಕಾದ ಗುರಿಯ ಕಲ್ಪನೆ ಹಾಗೂ ಹೊಣೆಗಾರಿಕೆಯನ್ನು ತರಲು ಪ್ರಯತ್ನಿಸುತ್ತದೆ. ಈ ದಿಸೆಯಲ್ಲಿ ಹಲವು ಬಾರಿ ಸೂಚಿಸಿರುವಂತೆ ಶಿಕ್ಷಕರಿಗಾಗಲೀ, ವಿದ್ಯಾರ್ಥಿಗಳಿಗಾಗಲೀ, ಇದರ ಪರಿಣಾಮವಾಗಿ ಪೋಷಕರಿಗಾಗಲೀ, ಶೈಕ್ಷಣಿಕ ಯೋಜಕರಿಗಾಗಲೀ ತಾವು ಎಲ್ಲಿದ್ದೇವೆ? ಎಲ್ಲಿರಬೇಕು? ಎನ್ನುವ ಬಗ್ಗೆ ಪರಿಜ್ಞಾನವಿದ್ದಂತಿಲ್ಲ. ವಿದ್ಯಾರ್ಥಿಗಳ ಪ್ರಗತಿಯನ್ನು ಅಳೆಯಲು ರೂಪಿತವಾಗಿರುವ ಮಾಪನಗಳು ಇಲ್ಲದಿರುವುದರಿಂದ ಶಿಕ್ಷಕರು ಗುರಿಯನ್ನು ತಪ್ಪುವುದು ಆಶ್ಚರ್ಯವೇನಲ್ಲ. ಕ್ರಮಬದ್ಧವಾದ ಹಾಜರಿಯಾಗಲೀ, ಪಠ್ಯಕ್ರಮದ ಪೂರೈಸುವಿಕೆಯಾಗಲೀ-ಯಾವ ಕಾಲಕ್ಕೂ ನಿಜವಾದ ಕಲಿಕೆಗೆ ಪರ್ಯಾಯವೆನಿಸುವುದಿಲ್ಲ. ಇದರ ಪರಿಣಾಮವಾಗಿ ವಿದ್ಯಾರ್ಥಿಗಳು ವ್ಯಾಸಂಗದಲ್ಲಿ ಆಸಕ್ತಿಯನ್ನು ಕಳೆದುಕೊಳ್ಳಬಹುದು. ಮಕ್ಕಳನ್ನು ಶಾಲೆಗೆ ಕಳುಹಿಸುವುದಕ್ಕಿಂತ ದುಡಿಮೆಗೆ ಹಚ್ಚುವುದು ಹೆಚ್ಚು ಉಪಯೋಗಕರವೆಂದು ಪೋಷಕರು ಭಾವಿಸಬಹುದು. ಯಾವುದೇ ಒಂದು ನಿರ್ದಿಷ್ಟ ಶೈಕ್ಷಣಿಕ ಹಂತದ ಕೊನೆಯಲ್ಲಿ ಎಲ್ಲ ಮಕ್ಕಳೂ ಕನಿಷ್ಠ ಕಲಿಕೆಯ ಹಂತಗಳನ್ನು ತಲುಪಬೇಕೆನ್ನುವುದು. ಶಿಕ್ಷಣ ವ್ಯವಸ್ಥೆಗೆ ಒಂದು ನಿರ್ದಿಷ್ಟ ದಿಕ್ಕನ್ನು ಒದಗಿಸುವುದರ ಮೂಲಕ ಜವಾಬ್ದಾರಿಯನ್ನು ಮೂಡಿಸುವಲ್ಲಿ ಯಶಸ್ವಿಯಾಗುತ್ತದೆ.

ಎರಡನೆಯದಾಗಿ, ಶಾಲೆಗಳ ಸುಧಾರಣೆಗಳ ಬಗ್ಗೆ ಕಾರ್ಯಕ್ರಮ ರೂಪಿಸುವಲ್ಲಿ ಕಲಿಕಾ ಕನಿಷ್ಠ ಹಂತಗಳು ಪರಿಣಾಮ ಕಾರಿ ಸಾಧನಗಳಾಗಬಹುದೆಂದು ಆಶಿಸಬಹುದಾಗಿದೆ. ನಿಜವಾದ ಅರ್ಥದಲ್ಲಿ ಶಾಲೆ ಅಥವಾ ಶಿಕ್ಷಣ ವ್ಯವಸ್ಥೆಯ ಗುಣಮಟ್ಟವು ಅದರ ವಿದ್ಯಾರ್ಥಿಗಳು ಮತ್ತು ಪದವೀಧರರು ನಿರ್ವಹಿಸಬಲ್ಲ ಸಾಮರ್ಥ್ಯವನ್ನು ಅವಲಂಬಿಸಿರುತ್ತದೆ. ಶಾಲೆಗಳ ಅಭಿವೃದ್ಧಿ ಕಾರ್ಯಕ್ರಮಗಳ ಬಗ್ಗೆ ಯೋಚಿಸುವಾಗ ಈ ಉದ್ದೇಶಕ್ಕಾಗಿ ಮಾಡಲಾಗುವ ತಲಾ ವೆಚ್ಚಕ್ಕೆ ಹೆಚ್ಚು ಗಮನ ಈಗ ನೀಡಲಾಗುತ್ತಿದೆ. ಇದಕ್ಕೆ ಬದಲಾಗಿ ಮಕ್ಕಳ ವಾಸ್ತವಿಕ ಕಲಿಕೆಯ ಆಧಾರದ ಮೇಲೆ ಶಾಲೆಯ

ಗುಣಮಟ್ಟವನ್ನು ನಿರ್ಧರಿಸುವುದು. ಅವಶ್ಯಕವಾಗಿದೆ. ಒಳ್ಳೆಯ ಶಾಲೆ ಎಂದರೆ ಯಾವುದು? ಉತ್ತಮ ಕಟ್ಟಡಗಳೇ? ಹೆಚ್ಚಿನ ಬೋಧನೋಪಕರಣಗಳೇ? ಅಥವಾ ಅರ್ಹ ಅಧ್ಯಾಪಕರೇ? ಈ ಪ್ರಶ್ನೆಗಳಿಗೆ ಸಮರ್ಪಕ ಉತ್ತರ ಪಡೆಯಲು ಹಾಗೂ ಉತ್ತಮ ಸೌಲಭ್ಯಗಳು ಯಾವುವು ಎಂದು ನಿರ್ಧರಿಸುವ ಮೊದಲು ನಾವು ಪ್ರತಿಯೊಂದು ಮಗು ವಾಸ್ತವವಾಗಿ ಸಾಧಿಸಬೇಕೆಂದು ಅಪೇಕ್ಷಿಸಲಾಗುವ ಸಾಮರ್ಥ್ಯಗಳನ್ನು ವಿವರಿಸಬೇಕಾಗುತ್ತದೆ.

ಮೂರನೆಯದಾಗಿ ಅತ್ಯಂತ ಮೂಲಭೂತವಾದ ವಿಷಯವೆಂದರೆ, ನಮ್ಮ ಸರ್ಕಾರಿ ಹಾಗೂ ನಗರ ಪಾಲಿಕೆಗಳ ಶಾಲೆಗಳಲ್ಲಿ ಕಲಿತ ಮಕ್ಕಳು ಅಲ್ಲಿ ೫ ವರ್ಷಗಳಿಗೂ ಹೆಚ್ಚು ಕಾಲವನ್ನು ಕಳೆದರೂ ಕೂಡ ಅವರ ಪಠ್ಯಪುಸ್ತಕಗಳನ್ನೇ ಅವರು ಓದಲು ಸಮರ್ಥರಾಗಿಲ್ಲ. ಈ ಶಾಲೆಗಳಲ್ಲಿ ಕಲಿಯುವ ಮಕ್ಕಳಿಗೆ ಪ್ರಾಥಮಿಕ ಶಿಕ್ಷಣದ ನಂತರ ಶಿಕ್ಷಣ ಸೌಲಭ್ಯಗಳು ವಿರಳ. ಆದ್ದರಿಂದ ಕಲಿವು ಅವರ ಜೀವನವಿಡೀ ಪ್ರಯೋಜನವಾಗಬೇಕು. ಮತ್ತು ಅವರು ಶಾಲೆಯಲ್ಲಿ ಕಳೆದ ವರ್ಷಗಳು ವ್ಯರ್ಥವಾಗದಂತೆ ಶಿಕ್ಷಣ ವ್ಯವಸ್ಥೆಯು ಎಚ್ಚರವಹಿಸಬೇಕು. ಪರಿಸರ ಅಥವಾ ಶಾಲೆ ಯಾವುದೇ ಇರಲಿ ಪ್ರಾಥಮಿಕ ಶಿಕ್ಷಣವನ್ನು ಪೂರ್ಣಗೊಳಿಸುವಷ್ಟರಲ್ಲಿ ಎಲ್ಲ ಮಕ್ಕಳೂ ಒಂದು ಕಲಿಕಾ ಕನಿಷ್ಠ ಹಂತವನ್ನು ತಲುಪಬೇಕು. ಇದರಿಂದ ಅವರು ಅಕ್ಷರಸ್ಥರಾಗಿ ಪ್ರಪಂಚವನ್ನು ಅರಿಯಲು, ಸಮುದಾಯದ ಉಪಯುಕ್ತ ಪೌರರಾಗಲು ಸಹಾಯಕವಾಗಬೇಕು.

**೩. ಕಲಿಕಾ ಕನಿಷ್ಠ ಹಂತದ ಸ್ಪಷ್ಟನೆ : ಪಠ್ಯಕ್ರಮ ಕುರಿತ ವಿಷಯ :** ಕಲಿಕೆಯು ವ್ಯಕ್ತಿಯ ಜ್ಞಾನ ಮತ್ತು ಜ್ಞಾನೇತರ ವಲಯಗಳನ್ನು ವಿಕಾಸಗೊಳಿಸುವುದರಿಂದ ಪ್ರತಿಯೊಂದು ಪಠ್ಯಕ್ರಮವೂ ಕೆಲವು ವಿಶಿಷ್ಟ ಶೈಕ್ಷಣಿಕ ಗುರಿಗಳು ಮತ್ತು ಅವುಗಳಿಗೆ ಸಂಬಂಧಿಸಿದ ಕಲಿಕಾ ಫಲಗಳನ್ನು ನಿಗದಿಪಡಿಸುತ್ತದೆ. ಸಾಧಾರಣವಾಗಿ ಇವುಗಳನ್ನು ಆದರ್ಶ ಕಲಿಕಾ ಸನ್ನಿವೇಶಗಳಿಗೆ ಹೊಂದುವಂತೆ ರಚಿಸಲಾಗುತ್ತಿದೆ. ಅಂದರೆ ಇದರ ಗುರಿ ವಿದ್ಯಾರ್ಥಿಯ ವ್ಯಕ್ತಿತ್ವವು ಸಂಪೂರ್ಣವಾಗಿ ವಿಕಾಸಗೊಂಡು, ಅವನು ಸಾಮಾಜಿಕವಾಗಿ ಉಪಯುಕ್ತ ಜೀವನ ನಡೆಸಲು ಸಹಾಯ ಮಾಡುವುದಾಗಿದೆ. ಈಗಿನ ಪಠ್ಯಕ್ರಮದ ಗುರಿಗಳು ಮತ್ತು ಅಪೇಕ್ಷಿತ ಕಲಿಕಾ ಫಲಗಳು ಮಕ್ಕಳನ್ನು ಉನ್ನತ ವ್ಯಾಸಂಗಕ್ಕೆ ಸಿದ್ಧಪಡಿಸುವ ಉದ್ದೇಶವುಳ್ಳವಾಗಿವೆ ಎಂಬ ಟೀಕೆಗೆ ಗುರಿಯಾಗಿವೆ. ತತ್ಪರಿಣಾಮವಾಗಿ ಪ್ರಾಥಮಿಕ ಹಂತದಲ್ಲಿ ಪಠ್ಯಕ್ರಮವು ಅಗತ್ಯಕ್ಕಿಂತ ಹೆಚ್ಚು ಮಾಹಿತಿಯಿಂದ ಕೂಡಿದ್ದು, ಮಕ್ಕಳ ನಿತ್ಯ ಜೀವನದಿಂದ ದೂರವಾಗಿದೆ.

ಪ್ರಾಥಮಿಕ ಹಂತದ ಪ್ರಾರಂಭದ ವರ್ಷಗಳಲ್ಲಿ ಮಕ್ಕಳ ನಿರೀಕ್ಷಿತ ಕಲಿಕಾ ಫಲವು ಅವರ ಪ್ರಬುದ್ಧತೆಯನ್ನು ಆಧರಿಸಿಲ್ಲ ಎಂದು ಹೇಳಲಾಗುತ್ತಿದೆ. ಈ ದ್ವಂದ್ವವು ಶೈಕ್ಷಣಿಕ ಸಾಧನೆಗೆ ಮತ್ತು ಸಮಾನತೆಗೆ ಮಾರಕವಾಗಿದೆ. ಪಠ್ಯವಸ್ತುವಿನ ಹೊರೆ ಹಲವು ಬಾರಿ ಶಿಕ್ಷಕರು ಬೋಧನ-ಕಲಿಕಾ ಪ್ರಕ್ರಿಯೆಯ ಮೂಲಭೂತ ತತ್ವಗಳನ್ನು ಕಡೆಗಣಿಸು

ವಂತೆ ಮಾಡುತ್ತದೆ. ಪಠ್ಯವಸ್ತುವನ್ನು ಪೂರ್ಣಗೊಳಿಸುವುದೇ ಪ್ರಮುಖವಾಗಿ ಕಲಿಕೆಯಲ್ಲಿ ಹಿಂದುಳಿದ ಮಕ್ಕಳ ಕಲಿಕೆ ಯನ್ನು ಕಡೆಗಣಿಸುವಂತಾಗಿದೆ. ಶಿಕ್ಷಕರು ಪರಿಹಾರ ಬೋಧನೆ, ಪ್ರಯೋಗಶೀಲತೆ, ವೀಕ್ಷಣೆ, ಚಟುವಟಿಕೆಯಾಧಾರಿತ ಕಲಿಕೆಯನ್ನು ಕೈ ಬಿಡುವಂತಾಗಿದೆ. ಸಾಂಪ್ರದಾಯಿಕ ಪಠ್ಯಪುಸ್ತಕಗಳು, ಉಪನ್ಯಾಸ ಪದ್ಧತಿಯ ಬೋಧನೆ, ಪಠ್ಯವಸ್ತುವನ್ನು ಪೂರ್ಣಗೊಳಿಸಲು ಸುಲಭ ಮಾರ್ಗಗಳಾಗಿವೆ. ಆದ್ದರಿಂದ ಪಠ್ಯಪುಸ್ತಕಗಳಿಗೆ ಹೆಚ್ಚು ಒತ್ತು ಕೊಡಲಾಗುತ್ತಿದೆ. ಇದು ಮಕ್ಕಳಲ್ಲಿ ಕುರುಡು ಪಾಠಕ್ಕೆ ದಾರಿ ಮಾಡಿಕೊಟ್ಟಿದೆ. ಇದರಿಂದ ಮನೆಯಲ್ಲಿ ಕಲಿಕೆಗೆ ಸೂಕ್ತ ಅನುಕೂಲವಿಲ್ಲದ, ವಂಚಿತ ವರ್ಗದ ಮಕ್ಕಳ ಕಲಿಕೆಗೆ ಧಕ್ಕೆಯಾಗಿದೆ. ಇದೇ ಕಾರಣದಿಂದ ಅನುತ್ತೀರ್ಣತೆ ಮತ್ತು ಶಾಲೆಯನ್ನು ಅರ್ಧದಲ್ಲೇ ಬಿಡುವ ಮಕ್ಕಳ ಸಂಖ್ಯೆ ಹೆಚ್ಚಾಗುತ್ತಿದೆ. ಈ ಎಲ್ಲಾ ತೊಡಕುಗಳನ್ನು ದಾಟಿ, ಕಲಿಯುವ ಮಕ್ಕಳು ಕಲಿಯಬೇಕಾಗಿರುವ ಮೂಲಭೂತ ಕೌಶಲ್ಯಗಳನ್ನು ಸಂಪೂರ್ಣವಾಗಿ ಕಲಿಯುತ್ತಿಲ್ಲ.

ಪ್ರಸ್ತುತ ಪಠ್ಯವಸ್ತುವಿನ ಹೊರೆ ಹಾಗೂ ಅನಾವಶ್ಯಕ ವಿಷಯಗಳನ್ನು ಗುರುತಿಸುವ ಮೂಲಕ ಸಮಸ್ಯೆಗಳ ಪರಿಹಾರಕ್ಕಾಗಿ ಕಲಿಕಾ ಕನಿಷ್ಠ ಹಂತಗಳನ್ನು ರೂಪಿಸಲಾಗಿದೆ. ಪ್ರಾಥಮಿಕ ಶಿಕ್ಷಣದ ಔಚಿತ್ಯ ಹಾಗೂ ಅವನ್ನು ಕ್ರಿಯಾತ್ಮಕ ವಾಗಿಸುವ ದಿಸೆಯಲ್ಲಿ ವ್ಯಾಪಕವಾದ ಪಠ್ಯವಸ್ತುವಿನ ಸುಧಾರಣೆಯತ್ತ ಕಲಿಕಾ ಕನಿಷ್ಠ ಹಂತ ಒಂದು ಅಂಗವಾಗಿದೆ.

ಈ ಪ್ರಯತ್ನದ ಪರಿಣಾಮಗಳು ಯಾವುವೆಂದರೆ;

* ಪಠ್ಯಕ್ರಮದ ಹಾಗೂ ಅನಾವಶ್ಯಕ ಮತ್ತು ಅಸಂಗತ ವಿವರಣೆಯನ್ನು ನೆನಪಿಟ್ಟುಕೊಳ್ಳುವ ಹೊರೆಯನ್ನು ಕಡಿಮೆ ಮಾಡುವುದು.

* ಪುಸ್ತಕದಲ್ಲಿರುವ ಮಾಹಿತಿಗಳನ್ನು ಮತ್ತು ವಸ್ತುನಿಷ್ಠ ವಿಷಯಗಳನ್ನು ಅರ್ಥಪೂರ್ಣ ತಿಳುವಳಿಕೆಯನ್ನಾಗಿ ಪರಿವರ್ತಿಸಿ ಅನ್ವಯಿಸಲು ಶಿಕ್ಷಕರಿಗೆ ಹೆಚ್ಚು ಅವಕಾಶ ನೀಡುವುದು.

* ಮೂಲಭೂತ ಸಾಮರ್ಥ್ಯಗಳನ್ನು ಹಾಗೂ ಕೌಶಲ್ಯಗಳನ್ನು ಕಲಿಸಿ ನಂತರ ಅವು ಶಾಶ್ವತವಾಗಿ ಉಳಿಯುವಂತೆ ಮಾಡುವುದರ ಮೂಲಕ ಅವರನ್ನು ಅನಕ್ಷರತೆಯ ಕಡೆಗೆ ಹೋಗದಂತೆ ತಡೆಯುವುದು.

* ಪ್ರತಿಭಾವಂತ ಮಕ್ಕಳಷ್ಟೇ ಅಲ್ಲದೆ ಬಹುತೇಕ ಮಕ್ಕಳು ಅದರಲ್ಲೂ ಪ್ರಥಮ ಪೀಳಿಗೆಯ ಕಲಿಕೆದಾರರು ಕಲಿಕೆಯ ಪ್ರಭುತ್ವ ಹೊಂದಲು ಅವಕಾಶ ನೀಡುವುದು.

**೪. ಕಲಿಕಾ ಕನಿಷ್ಠ ಹಂತಗಳ ಕೆಲವು ಮೂಲಭೂತ ಲಕ್ಷಣಗಳು :** ಕಲಿಕಾ ಕನಿಷ್ಠ ಹಂತಗಳ ನಿರೂಪಣೆಯು ಕಲಿಕಾ ಸಾಧನೆಗಳನ್ನು ತೀವ್ರಗೊಳಿಸುವುದರ ಜೊತೆಗೆ ಇದುವೇ ವ್ಯವಸ್ಥೆಯ ಹಾಗೂ ಶಿಕ್ಷಕರ ಗುರಿಸಾಧನೆಯ ಸೂಚಿಯಾಗ

ಬೇಕು. ಆದುದರಿಂದ ಕಲಿಕಾ ಕನಿಷ್ಠ ಹಂತಗಳು ಸಮಂಜಸವಾಗಿಯೂ, ಕ್ರಿಯಾಶೀಲವಾಗಿಯೂ, ಸುಲಭವಾಗಿ ಅರ್ಥ ವಾಗುವಂತೆಯೂ, ಸಾಧನೀಯವಾಗಿಯೂ ಮತ್ತು ಮೌಲ್ಯಮಾಪನ ಮಾಡುವಂತೆಯೂ ಇರಬೇಕು.

**ಸಾಧನೀಯತೆ :** ಕಲಿಕಾ ಕನಿಷ್ಠ ಹಂತಗಳ ಮೂಲಸ್ವರೂಪವು ತೃಪ್ತಿಪಡಿಸಬೇಕಾದ ಅಂಶವೇನೆಂದರೆ ಕಲಿಯುವ ವರೆಲ್ಲರೂ ಸಾಧಿಸಬಹುದಾದ ಕಲಿಕಾ ಉದ್ದೇಶಗಳಿಗೆ ಅನುರೂಪವಾಗಿರಬೇಕು. ಈ ಅಗತ್ಯತೆಯು ಕೆಳಕಂಡ ಕೆಲ ವೊಂದು ನಿರ್ದಿಷ್ಟ ಕಾರಣಗಳಿಂದಾಗಿದೆ ಅವುಗಳೆಂದರೆ :

**i) ಸಾಧಿಸಬಲ್ಲ ನಿರ್ದಿಷ್ಟಗಳು ಮತ್ತು ಗುರಿಗಳಾಗಿ :** ನಮ್ಮ ಪಠ್ಯವಸ್ತುವಿನ ಉದ್ದೇಶಗಳು ಮಕ್ಕಳ ನಿತ್ಯಜೀವನ ಪರಿಸರದಿಂದ ದೂರಾವಾಗಿವೆ ಎಂಬುದು ಸಾಮಾನ್ಯ ಅಭಿಪ್ರಾಯ. ಕೆಲವೇ ಶಿಕ್ಷಕರು ಮಾತ್ರ ಮಕ್ಕಳಲ್ಲಿ ಈ ಉದ್ದೇಶ ಗಳನ್ನು ಈಡೇರಿಸುವಲ್ಲಿ ಶಕ್ತರಾಗಿದ್ದಾರೆ. ಶಿಕ್ಷಕರಲ್ಲಿ ನಿಗದಿತ ಪಠ್ಯಕ್ರಮದ ಮೂಲೋದ್ದೇಶಗಳನ್ನು ಸಾಧಿಸಬಹುದೆಂದು ಆತ್ಮವಿಶ್ವಾಸ ಮೂಡಿದಾಗ ಮಾತ್ರ ಗುರಿ ನಿಷ್ಠ ಬೋಧನೆ ಸಾಧ್ಯ. ಶಿಕ್ಷಕರು ಕಲಿಕಾ ಉದ್ದೇಶಗಳನ್ನು ನಿರ್ವಹಿಸ ಬಹುದಾದ ಗುರಿಗಳನ್ನಾಗಿ ಬಳಸುವಂತಹ ಸನ್ನಿವೇಶವನ್ನು ನಮ್ಮ ಶಿಕ್ಷಣ ಸಂಸ್ಥೆಗಳಲ್ಲಿ ತರಬೇಕಾಗಿದೆ.

**ii) ಪ್ರತಿಯೊಂದು ಮಗುವಿನ ಕಲಿಕಾ ಪ್ರಭುತ್ವದ ಸಾಧನೆಗಾಗಿ :** ಪ್ರಸಕ್ತ ಉದ್ದೇಶಗಳನ್ನು ತರಗತಿಯ ಕೆಲವೇ ಮಕ್ಕಳು ಸಾಧಿಸುವಂತವರಾಗಿದ್ದಾರೆ ಎಂಬುದು ಸಾಧನಾ ಪರೀಕ್ಷೆಗಳಿಂದ ತಿಳಿದುಬಂದಿದೆ. ಬಹುತೇಕ ಮಕ್ಕಳು ಕಲಿಯುವುದಿಲ್ಲ, ಅಪೂರ್ಣವಾಗಿ ಕಲಿಯುತ್ತಾರೆ ಅಥವಾ ಕಲಿತದ್ದನ್ನು ಬೇಗ ಮರೆಯುತ್ತಾರೆ. ಆದುದರಿಂದ ಕಲಿಕಾ ಕನಿಷ್ಠ ಹಂತಗಳು ಮಕ್ಕಳ ನಿಜಜೀವನಕ್ಕೆ ಹತ್ತಿರವಾಗಿದ್ದು, ತರಗತಿಯ ಎಲ್ಲಾ ಮಕ್ಕಳೂ ಸಾಧಿಸುವಂತಿರಬೇಕು. ಮುಂಬರುವ ದಿನಗಳಲ್ಲಿ ಶೇಕಡ ೮೦ರಷ್ಟು ಅಥವಾ ಹೆಚ್ಚು ಮಕ್ಕಳು ಕನಿಷ್ಠ ಶೇಕಡ ೮೦ರಷ್ಟು ಸೂಚಿತ ಕಲಿಕಾ ಹಂತಗಳನ್ನು ಸಾಧಿಸಲೇಬೇಕೆಂಬುದು ಶಿಕ್ಷಕರ ಗುರಿಯಾಗಿರಬೇಕು.

**iii)** ಮಕ್ಕಳ ಸಾಧನಾ ಮಟ್ಟವು ಪ್ರಾಂತ್ಯ, ಜಿಲ್ಲೆ, ಶಾಲಾ ಸನ್ನಿವೇಶ, ಸಾಮಾಜಿಕ, ಆರ್ಥಿಕ ಪರಿಸ್ಥಿತಿ ಮತ್ತಿತರೆ ಅಂಶಗಳನ್ನು ಅವಲಂಬಿಸಿದೆ. ಆದ್ದರಿಂದ ಸಾಧಿಸಬಹುದಾದ ಕಲಿಕಾ ಕನಿಷ್ಠ ಹಂತಗಳ ನಿರೂಪಣೆಯು ಅವುಗಳ ಅನುಷ್ಠಾನದಲ್ಲಿ ಸಂದರ್ಭಕ್ಕೆ ತಕ್ಕಂತೆ ಹೊಂದಾಣಿಕೆಗೆ ಅವಕಾಶವಿದ್ದಾಗ ಮಾತ್ರ ಸಾಧ್ಯ. ಪ್ರತಿಯೊಂದು ಪ್ರದೇಶವೂ ಅದರಲ್ಲೂ  ಜಿಲ್ಲೆಗಳು ತಮ್ಮ ತಮ್ಮ ಪರಿಸ್ಥಿತಿಗೆ ಅನುಗುಣವಾಗಿ ಕಲಿಕಾ ಕನಿಷ್ಠ ಹಂತಗಳನ್ನು ವಿಶ್ಲೇಷಿಸಿರಬೇಕು ಹಾಗೂ ಶಾಲೆಗಳಲ್ಲಿನ ಎಲ್ಲಾ ಮಕ್ಕಳೂ ಈ ಹಂತವನ್ನು ಮುಟ್ಟುವ ರೀತಿಯಲ್ಲಿ ನಿಗದಿಪಡಿಸಿದ ಕಾಲಮಿತಿಯಲ್ಲಿ ಇವುಗಳನ್ನು ಸಾಧಿಸಲು ಮಧ್ಯಂತರ ಗುರಿಗಳನ್ನು ಇಟ್ಟುಕೊಳ್ಳಬೇಕು. ಶಾಲಾ ವ್ಯವಸ್ಥೆಗೆ ಒದಗಿಸಬಹುದಾದ ಎಲ್ಲಾ

ಸೌಲಭ್ಯಗಳನ್ನು ಸುಧಾರಿಸುವುದರಿಂದ ಪ್ರತಿ ಶಾಲೆ ಅಥವಾ ಜಿಲ್ಲೆಯು ಕಲಿಕಾ ಕನಿಷ್ಠ ಹಂತಗಳನ್ನು ಸಾಧಿಸಬಹುದೆಂದು ನಿರೀಕ್ಷಿಸಲಾಗಿದೆ. ಈ ಸಾಧನೆಯ ಕಾಲಮಿತಿಯಲ್ಲಿ ವ್ಯತ್ಯಾಸ ಸಾಧ್ಯ. ಎಲ್ಲೆಲ್ಲಿ ಕಲಿಕಾ ಮೌಲ್ಯಗಳು ಕೆಳಮಟ್ಟದಲ್ಲಿವೆಯೋ ಅಲ್ಲಲ್ಲಿ ಹೆಚ್ಚಿನ ಸಂಪನ್ಮೂಲಗಳನ್ನು ದೊರಕಿಸಿಕೊಡಲು ಶ್ರಮಿಸಬೇಕು. ಜೊತೆಗೆ ಅಭಿವೃದ್ಧಿಯ ವೇಗವನ್ನು ತೀವ್ರಗೊಳಿಸಬೇಕು. ಇದರಿಂದ ಅಸಮಾನತೆಯನ್ನು ಕುಗ್ಗಿಸಿ, ಅತಿ ಕಡಿಮೆ ಅವಧಿಯಲ್ಲಿ ಇಡೀ ದೇಶದ ಶಿಕ್ಷಣ ಮಟ್ಟವನ್ನು ಸಮಾನತೆಯತ್ತ ಒಯ್ಯಬಹುದು.

**ಸಂವಹನ :** ಈ ಕಲಿಕಾ ಕನಿಷ್ಠ ಹಂತಗಳು ನೈಜ ಹಾಗೂ ಸಾಧಿಸಬಲ್ಲವುಗಳಷ್ಟಾದರೆ ಸಾಲದು. ಇವು ಎಲ್ಲಾ ಶಿಕ್ಷಕರಿಗೂ ತಿಳಿಯುವ ರೀತಿ ಮತ್ತು ಭಾಷೆಯಲ್ಲಿರುವುದು ಅಷ್ಟೇ ಮುಖ್ಯ. ಏಕೆಂದರೆ ಬಹಳಷ್ಟು ಶಿಕ್ಷಕರು ಯಾವುದೇ ರೀತಿಯ ಸಹಾಯವಾಗಲೀ ಅಥವಾ ಮಾರ್ಗದರ್ಶನವಾಗಲೀ ಸಿಗದ ಗ್ರಾಮೀಣ ಪ್ರದೇಶಗಳಲ್ಲಿ ಕೆಲಸ ಮಾಡುತ್ತಾರೆ. ಈ ಕಲಿಕಾ ಕನಿಷ್ಠ ಹಂತಗಳು ಕೇವಲ ಪ್ರಾಥಮಿಕ ಶಿಕ್ಷಕರಿಗಷ್ಟೇ ಅಲ್ಲ. ಅನೌಪಚಾರಿಕ ಶಿಕ್ಷಣದ ಶಿಕ್ಷಕರಿಗೆ, ಪೋಷಕರಿಗೆ ಮತ್ತು ಸಮುದಾಯಕ್ಕೆ ಕೂಡ ಅರ್ಥವಾಗುವಂತಿರಬೇಕು. ಈ ರೀತಿಯಾಗಿ ಸಾಧಿಸಬಲ್ಲ ಗುರಿಗಳಾಗಿ ಕಲಿಕಾ ಕನಿಷ್ಠ ಹಂತಗಳು ಕೆಲಸ ಮಾಡಬೇಕಾದರೆ ಅವು ಸರಳವಾಗಿರಬೇಕು. ಪ್ರಾಥಮಿಕ ಶಿಕ್ಷಕರು ಹಾಗೂ ಅನೌಪಚಾರಿಕ ಶಿಕ್ಷಕರ ಶೈಲಿಗೆ ಅನುಗುಣವಾಗಿ, ಅವರು ಬೋಧಿಸಲು ಮತ್ತು ಮೌಲ್ಯಮಾಪನಾ ವಿಧಾನಗಳನ್ನು ರೂಪಿಸಲು ಅನುವಾಗುವಂತೆ ಈ ಸಮಿತಿಯ ವರದಿಯು ಪ್ರಯತ್ನಿಸಿದೆ.

**ಮೌಲ್ಯನಿರ್ಣಯ :** ಕಲಿಯುವಿಕೆಯಲ್ಲಿ ಮೌಲ್ಯಮಾಪನ ಅತ್ಯಗತ್ಯ. ಇದು ಕಲಿಕಾ ಕನಿಷ್ಠ ಹಂತಗಳಿಗೂ ಅನ್ವಯವಾಗುತ್ತದೆ. ನಿರಂತರ ಮತ್ತು ವ್ಯಾಪಕ ಮೌಲ್ಯಮಾಪನವು ಅಂತರ್ಗತವಾಗಿರುವಂತಹ ಕಲಿಕಾ ಕನಿಷ್ಠ ಹಂತಗಳು ತಯಾರಾಗಬೇಕು. ಬಹಳಷ್ಟು ಶಾಲೆಗಳಲ್ಲಿ ಈಗ ಕ್ರಮವಾದ ಮೌಲ್ಯಮಾಪನಾ ವಿಧಾನಗಳಿಲ್ಲ. ಅನೇಕ ರಾಜ್ಯಗಳಲ್ಲಿ ಸ್ವಯಂಚಾಲಿತ ತೇರ್ಗಡೆ ಅಥವಾ ಅನುತ್ತೀರ್ಣರಹಿತವಾದಂತಹ ಧೋರಣೆಗಳನ್ನು ಅನುಸರಿಸಲಾಗುತ್ತಿದೆ. ಇದರಿಂದಾಗಿ ಬಹಳಷ್ಟು ಮಕ್ಕಳು ಶಾಲೆಯನ್ನು ತೊರೆಯುವ ಸಂಭವವಿದೆ. ಶಾಲೆಗಳಲ್ಲಿ ಸುವ್ಯವಸ್ಥಿತವಾದ ಬೋಧನಾ-ಕಲಿಕೆಯ ಪರಿಸರವನ್ನು ಸೃಷ್ಟಿಸಿದಾಗ ಸ್ವಯಂಚಾಲಿತ ತೇರ್ಗಡೆಯ ಧೋರಣೆ ಅರ್ಥಪೂರ್ಣವಾಗುತ್ತದೆ. ಬಹಳಷ್ಟು ಶಿಕ್ಷಕರು ಈ ಅನುತ್ತೀರ್ಣರಹಿತ ಧೋರಣೆಯನ್ನು ಪರೀಕ್ಷಾರಹಿತ ವಿಧಾನವೆಂದು ಪರಿಗಣಿಸಿ ಮೌಲ್ಯಮಾಪನವನ್ನೇ ತ್ಯಜಿಸಿದ್ದಾರೆಂದು ಹೇಳಬಹುದು. ಇದರಿಂದಾಗಿ ಪ್ರಾಥಮಿಕ ಶಿಕ್ಷಣದ ಅಂತಿಮ ಹಂತ ತಲುಪಿದಾಗ ಮಕ್ಕಳ ಕಲಿಕಾ ಪ್ರಭುತ್ವವು ಯಾರಿಗೂ ತಿಳಿಯುವುದಿಲ್ಲ. ಈ ಪರಿಸ್ಥಿತಿಯನ್ನು ಅವಲೋಕಿಸಿ ೧೯೮೮ರಲ್ಲಿ ಎಂಟನೇ ಯೋಜನೆಯ ಕಾರ್ಯತಂಡವು ಮಕ್ಕಳ ವ್ಯಾಪಕ ಮೌಲ್ಯಮಾಪನಾ ಪದ್ಧತಿಯ ಅಳವಡಿಕೆಗಾಗಿ ಶಿಫಾರಸ್ಸು ಮಾಡಿದೆ.

ಅವಶ್ಯಕ ಕಲಿಕಾ ವಸ್ತು ವಿಷಯಗಳಲ್ಲಿ ಮಕ್ಕಳು ಕಲಿಕಾ ಪ್ರಭುತ್ವ ಸಾಧಿಸುವಂತಹ ಸ್ಪಷ್ಟ ಗುರಿಗಳನ್ನು ಹೊಂದಿರಬೇಕು. ಪೋಷಕರೂ ಸಹ ತಮ್ಮ ಮಕ್ಕಳ ಕಲಿಕಾ ಪ್ರಗತಿಯನ್ನು ಮೌಲ್ಯಮಾಪನ ಮಾಡುವುದರಲ್ಲಿ ಆಸಕ್ತಿ ಹೊಂದಿರುತ್ತಾರೆ. ಶಿಕ್ಷಕರೂ ಸಹ ತಾವು ಬೋಧಿಸುವ ವಿಷಯಗಳ ಕಲಿಕಾ ಫಲಗಳ ಬಗ್ಗೆ ತಿಳಿದಿರಬೇಕು. ಶಾಲೆಗಳ ಮತ್ತು ಶಿಕ್ಷಕರ ನಿರ್ವಹಣಾ ಪ್ರಗತಿಯು ಕಲಿಯುವವರ ಪ್ರಗತಿಯನ್ನು ಅವಲಂಬಿಸಿದೆ. ಶೈಕ್ಷಣಿಕ ಆಡಳಿತಗಾರರು ಇಡೀ ವ್ಯವಸ್ಥೆಯಲ್ಲಿ ಗುಣವಿಮರ್ಶೆ ಮಾಡುವಂತಹ ಸಾಧನಗಳನ್ನು ಅಳವಡಿಸಬೇಕು.

ಶಿಕ್ಷಕರು ಕಲಿಕಾ ಕನಿಷ್ಠ ಹಂತಗಳ ಸ್ಪಷ್ಟ ಗುರಿಯನ್ನು ಹೊಂದಿರುವುದರ ಜೊತೆಗೆ ಪರೀಕ್ಷಾ ಸಾಧನಗಳನ್ನು ತಯಾರಿಸಿ ಬಳಸಲು ಅವಕಾಶವಿರಬೇಕು. ಮಗುವು ಯಾವ ಸಾಮರ್ಥ್ಯಗಳನ್ನು ಕಲಿತಿಲ್ಲವೋ ಅವುಗಳನ್ನು ಗುರುತಿಸಿ ಪುನಃ ಕಲಿಯುವಂತೆ ಸಹಾಯ ಮಾಡಬೇಕು. ಜೊತೆಗೆ ಪರಿಹಾರ ಬೋಧನೆಯನ್ನೂ ಕೈಗೆತ್ತಿಕೊಳ್ಳಬೇಕು. ಇದು ಮಗುವು ಒಂದು ಹಂತದಿಂದ ಇನ್ನೊಂದು ಹಂತಕ್ಕೆ ಹೋಗುವಾಗ ತಾನು ಕಲಿತ ವಿಷಯಗಳ ಮೇಲೆ ಪ್ರಭುತ್ವ ಗಳಿಸಲು ನೆರವಾಗಬೇಕು. ಹೀಗೆ ಕಲಿಯುವವನ ಸಾಧನೆಯನ್ನು ಶಿಕ್ಷಕರು ಸುಲಭವಾಗಿ ಅಳೆಯಲು ಬರವಣಿಗೆ, ಮೌಖಿಕ ಅಥವಾ ಇತರ ರೀತಿಯ ಪರೀಕ್ಷೆಗಳನ್ನು ಬಳಸುವಂತೆ ಕಲಿಕಾ ಕನಿಷ್ಠ ಹಂತಗಳನ್ನು ರೂಪಿಸಲಾಗಿದೆ.

**ಕಲಿಕಾ ಧಾರೆ :** ಒಂದನೇ ತರಗತಿಯಿಂದ ೫ನೇ ತರಗತಿಯವರೆಗೆ ಇರುವ ಕಲಿಕೆಯ ಪ್ರತಿ ಕಲಿಕಾ ಘಟಕದ ಮೇಲೆ ಮಕ್ಕಳು ಪ್ರಭುತ್ವ ಸಾಧಿಸಲು ಅನುವಾಗುವಂತೆ ಈ ಕಲಿಕಾ ಕನಿಷ್ಠ ಹಂತಗಳನ್ನು ಸರಳವೂ ವ್ಯಾಪಕವೂ ಆಗಿರುವಂತೆ ರಚಿಸಲು ಪ್ರಯತ್ನಿಸಲಾಗಿದೆ. ಈ ಕಲಿಕೆಯ ಘಟಕಗಳನ್ನು ಒಂದು ಶ್ರೇಣೀಕೃತ ಕ್ರಮದಲ್ಲಿ ಇರುವಂತೆ ನೋಡಿಕೊಳ್ಳಲಾಗಿದೆ. ಹಾಗೂ ಒಂದು ಕಲಿಕಾ ಘಟಕದಿಂದ ಮತ್ತೊಂದು ಕಲಿಕಾ ಘಟಕಕ್ಕೆ ನಿರಂತರ ಸಂಬಂಧವನ್ನು ಕಲ್ಪಿಸಲಾಗಿದೆ. ಇದು ಮಕ್ಕಳಿಗೆ ಕಲಿಕಾ ಕನಿಷ್ಠ ಹಂತವನ್ನು ಸಾಧಿಸುವುದರ ಜೊತೆಗೆ ನಮ್ಮ ಕಲಿಕೆಯನ್ನು ಅರ್ಥಪೂರ್ಣ ಹಾಗೂ ಆನಂದದಾಯಕವಾಗುವಂತೆ ಮಾಡುತ್ತದೆ.

**೫. ಅನೌಪಚಾರಿಕ ಶಿಕ್ಷಣದಲ್ಲಿ ತುಲನಾತ್ಮಕ ಕಲಿಕೆ :** ಕಲಿಕಾ ಕನಿಷ್ಠ ಹಂತಗಳನ್ನು ತರಗತಿವಾರು ಐದು ಹಂತಗಳನ್ನಾಗಿ ವಿಂಗಡಿಸಿದೆ. ಹೀಗಿದ್ದರೂ ಈ ಸೂಚಿಗಳು ಉಲ್ಲಂಘಿಸಲಾಗದ ವಿಂಗಡಣೆಗಳೇನೂ ಅಲ್ಲ.

## ೧. ೯. ಪರಿಸರ ಅಧ್ಯಯನ : ಕಲಿಕಾ ಕನಿಷ್ಠ ಹಂತಗಳು

**ಪೀಠಿಕೆ :** ಸಾಮಾನ್ಯವಾಗಿ ಪರಿಸರವು ನಿಸರ್ಗ ಮತ್ತು ಮಾನವ ಎಂಬ ಎರಡು ಮುಖ್ಯ ಅಂಶಗಳನ್ನು ಒಳಗೊಂಡಿದೆ. ಈ ಎರಡು ಅಂಶಗಳು ಪರಿಸರ ಅಧ್ಯಯನದ ಪಠ್ಯ ವಸ್ತುವಿನಲ್ಲಿ ಭಾಗ-೧ ಮತ್ತು ಭಾಗ-೨ ಅಥವಾ ಸಾಮಾಜಿಕ

ಅಭ್ಯಾಸ ಮತ್ತು ವಿಜ್ಞಾನ ಎಂಬುದಾಗಿ ಕರೆಯಲ್ಪಟ್ಟಿವೆ. ವಾಸ್ತವವಾಗಿ ಮಾನವ, ನಿಸರ್ಗ ಮತ್ತು ಸಮಾಜ -ಇವುಗಳ ಪರಸ್ಪರ ವರ್ತನೆಯಿಂದ ಉಂಟಾದ ಉಪಲಬ್ಧವನ್ನು ಸಮಗ್ರ ಪರಿಸರ ಎಂದು ಪರಿಗಣಿಸಬಹುದು.

ಉದ್ದೇಶಿತ ಪಠ್ಯವಸ್ತುವು ಮೇಲ್ಕಂಡ ಮೂರು ಅಂಶಗಳನ್ನು ಒಳಗೊಂಡಿದ್ದು ಹತ್ತು ಪ್ರಮುಖ ಸಾಮರ್ಥ್ಯಗಳ ಸುತ್ತ ಹೆಣೆಯಲ್ಪಟ್ಟಿದೆ. ಮೊದಲನೆಯದು ನೈಸರ್ಗಿಕ ಮತ್ತು ಸಾಮಾಜಿಕ ಪರಿಸರ ಹಾಗೂ ವ್ಯಕ್ತಿಯ ಉತ್ತಮ ಜೀವನಕ್ಕೆ ಸಂಬಂಧಿಸಿದ್ದು, ಮುಂದಿನ ಐದು ಸಾಮರ್ಥ್ಯಗಳು ಸಾಮಾಜಿಕ ಅಂಶಗಳಾದ ನಾಗರಿಕ ಪರಿಸರ, ವೃತ್ತಿ ಪ್ರಪಂಚ, ಮಾನವ ಮತ್ತು ನೈಸರ್ಗಿಕ ಪರಿಸರ, ಮಾನವನ ಭೂತ-ವರ್ತಮಾನ ಸಂಬಂಧ ಮತ್ತು ಪರಿಸರ ಪ್ರಭಾವಿತ ಸಹಜ ಸಮಸ್ಯೆಗಳನ್ನು ಒಳಗೊಂಡಿದೆ. ಕೊನೆಯ ನಾಲ್ಕು ಸಾಮರ್ಥ್ಯಗಳು ನೈಸರ್ಗಿಕ ಪರಿಸರದ ವೈಜ್ಞಾನಿಕ ಅಂಶಗಳನ್ನಲ್ಲದೆ ವೈಯಕ್ತಿಕ ಮತ್ತು ಸಾಮಾಜಿಕ ಅಂಶಗಳನ್ನು ಅಂದರೆ ಆರೋಗ್ಯ, ಸಜೀವ-ನಿರ್ಜೀವ ವಸ್ತುಗಳು ಮತ್ತು ಭೂಮಿ-ಆಕಾಶಕ್ಕೆ ಸಂಬಂಧಿಸಿದ ಅಂಶಗಳನ್ನು ಒಳಗೊಂಡಿದೆ.

ವಿಷಯವಸ್ತುವೂ ಸೇರಿದಂತೆ ಜ್ಞಾನ, ಭಾವನಾತ್ಮಕ ಮತ್ತು ಮನೋಬಲ ವಲಯಗಳ ಬೆಳವಣಿಗೆಯು ಗುರಿಯಾಗಿರುವ ಈ ಹತ್ತು ಸಾಮರ್ಥ್ಯಗಳನ್ನು ಕೆಳಕಂಡಂತೆ ಪಟ್ಟಿ ಮಾಡಲಾಗಿದೆ.

ವಿದ್ಯಾರ್ಥಿಯು,

೧. ಸಾಮಾಜಿಕ ಮತ್ತು ನೈಸರ್ಗಿಕ ಪರಿಸರದಲ್ಲಿ ತನ್ನ ಉತ್ತಮ ಜೀವನಕ್ಕೆ ಸಂಬಂಧಿಸಿದಂತಹ ಅರಿವನ್ನು ಪಡೆಯುವನು.

೨. ಸಾಮಾಜಿಕ-ನಾಗರಿಕ ಪರಿಸರದ ಮುಖ್ಯ ಅಂಶಗಳನ್ನು ಅರ್ಥೈಸಿ ತನ್ನ ಕಾರ್ಯ ತತ್ಪರತೆಯನ್ನು ಕಂಡುಕೊಳ್ಳುವನು.

೩. ವೃತ್ತಿಯಲ್ಲಿ ತೊಡಗಿರುವ ಹಲವಾರು ವ್ಯಕ್ತಿಗಳನ್ನು ತಿಳಿದು 'ವೃತ್ತಿ ಪ್ರಪಂಚ'ವನ್ನು ಮೆಚ್ಚುವನು.

೪. ಮಾನವ ಮತ್ತು ಅವನ ಪರಿಸರಗಳ ಪ್ರಭಾವಿತ ಸಂಬಂಧಗಳನ್ನು ತಿಳಿದು ಅರ್ಥೈಸುವನು.

೫. ಮಾನವನ ಭೂತ ಮತ್ತು ವರ್ತಮಾನಗಳ ಸಂಬಂಧಗಳನ್ನು ಗಮನಿಸಿ ಭೂತಕಾಲದ ಘಟನೆಗಳನ್ನು ಸರಿಯಾದ ದೃಷ್ಟಿಯಲ್ಲಿ ನೋಡುವನು.

೬. ಸರಳ ಮತ್ತು ಸುಲಭ ಸಾಮಾಜಿಕ, ಆರ್ಥಿಕ ಸಂದರ್ಭಗಳು ಮತ್ತು ಸಮಸ್ಯೆಗಳನ್ನು ಗಮನಿಸಿ, ವಿಶ್ಲೇಷಿಸಿ ತನ್ನ ಅನುಭವದ ಇತಿಮಿತಿಯೊಳಗೆ ಸಾಧ್ಯ ಪರಿಹಾರಗಳನ್ನು ಕಂಡುಕೊಳ್ಳುವನು.

೭. ಉತ್ತಮ ಆರೋಗ್ಯವನ್ನು ಕಾಪಾಡಿಕೊಳ್ಳುವ ಅಂಶಗಳನ್ನು ತಿಳಿಯುವನು.

೮. ತನ್ನ ಪರಿಸರದಲ್ಲಿರುವ ಸಜೀವಿಗಳ ಬಗ್ಗೆ ಮಾಹಿತಿ ಸಂಗ್ರಹಿಸುವ, ವರ್ಗೀಕರಿಸುವ ಕೌಶಲ್ಯಗಳನ್ನು ಬೆಳೆಸಿಕೊಂಡು ಸರಳ ತೀರ್ಮಾನಗಳಿಗೆ ಬರುವನು.

೯. ಕೆಲವು ಸಮಾನ ಗುಣಗಳುಳ್ಳ ನಿರ್ಜೀವ ವಸ್ತುಗಳನ್ನು ವೀಕ್ಷಿಸುವನು ಮತ್ತು ಪರೀಕ್ಷಿಸುವನು.

೧೦. ಭೂಮಿ ಮತ್ತು ಆಕಾಶಗಳ ಸರಳ ಘಟನೆಗಳನ್ನು ವೀಕ್ಷಿಸಿ ತೀರ್ಮಾನಗಳಿಗೆ ಬರುವನು.

ಕಲಿಕಾ ಕನಿಷ್ಠ ಹಂತಗಳ ಯೋಜನೆಯು ಪರಿಸರ ಅಧ್ಯಯನದ ವಿವಿಧ ಘಟಕಗಳ ಮಧ್ಯೆ ವಿಂಗಡಣಾ ರೇಖೆ ಎಳೆಯದೆ ಸಹಸಂಬಂಧವನ್ನು ಪ್ರತಿಪಾದಿಸುತ್ತದೆ. ಪ್ರತಿಯೊಂದು ಮಗುವೂ ತಾನು ಬೆಳೆದಂತೆಲ್ಲಾ ಸಾಮಾಜಿಕ ಜವಾಬ್ದಾರಿಯುತ ಪೌರತ್ವವನ್ನು ಬೆಳೆಸಿಕೊಳ್ಳಬೇಕು. ಪರಿಸರದ ಪ್ರಾಮುಖ್ಯತೆ ಮತ್ತು ಪರಿಸರ ಸಂರಕ್ಷಣೆಯ ಅಗತ್ಯತೆಯನ್ನು ಅರಿತುಕೊಳ್ಳಬೇಕು. ಅವನಲ್ಲಿ ಪಕ್ವತೆ ಬೆಳೆದಂತೆಲ್ಲಾ ಸಾಮಾಜಿಕ, ಆರ್ಥಿಕ ಮತ್ತು ವೈಜ್ಞಾನಿಕ ದೃಷ್ಟಿಕೋನವನ್ನು ಅವನು ವಿಸ್ತರಿಸಿಕೊಳ್ಳಬೇಕು. ಇಂತಹ ಉದಾತ್ತ ಜೀವನದ ಗುರಿಗಳನ್ನು ಸಾಧಿಸಲು ಮೇಲೆ ಹೇಳಿದ ಸಾಮರ್ಥ್ಯಗಳನ್ನು ಪ್ರಾಥಮಿಕ ಶಿಕ್ಷಣದ ಪ್ರಾರಂಭ ಹಂತದಲ್ಲಿಯೇ ಪ್ರತಿಯೊಂದು ಮಗುವೂ ಸಿದ್ಧಿಸಿ ಕೊಳ್ಳಬೇಕು.

ಪ್ರಮುಖ ಸಾಮರ್ಥ್ಯಗಳನ್ನು ಹಂತ ಹಂತವಾಗಿ ಬೆಳೆಸುವಾಗ ಉಪಸಾಮರ್ಥ್ಯಗಳನ್ನು ವಿಷಯ ಘಟಕಕ್ಕೆ ಅನುಗುಣವಾಗಿ ಕ್ರಮಬದ್ಧ ಮತ್ತು ಅಂತರ ಸಂಬಂಧ ಸೂಚಿಸುವಂತೆ ಚಿತ್ರಿಸಲಾಗಿದೆ. ಶಿಕ್ಷಕರು ಬೋಧನೆ ಮತ್ತು ಮೌಲ್ಯಮಾಪನ ಮಾಡುವಾಗ ಒಂದು ವರ್ಗದಲ್ಲಿ ಸಾಮರ್ಥ್ಯಗಳ ಸಮಾನಾಂತರ ಹಾಗೂ ವರ್ಗಗಳ ನಡುವೆ ಲಂಬಸಂಬಂಧಗಳಿರುವುದನ್ನು ಗಮನದಲ್ಲಿಟ್ಟು ಕೊಂಡಿರಬೇಕು. ಪ್ರಮುಖ ವಸ್ತು ವಿಷಯಗಳನ್ನು ಒಳಗೊಂಡಂತೆ ಸಾಮರ್ಥ್ಯಗಳನ್ನು ಸೂಚಿಸಲು ನಿರ್ದಿಷ್ಟ ಸಂಖ್ಯಾ ವ್ಯವಸ್ಥೆಯನ್ನು ಬಳಸಲಾಗಿದೆ.

ಉದಾ : ಉಪಸಾಮರ್ಥ್ಯ ೫.೪.೨. ಎಂಬುದು ೪ನೇ ತರಗತಿಯ ಐದನೆಯ ಪ್ರಮುಖ ಸಾಮರ್ಥ್ಯಕ್ಕೆ ಸೇರಿದ್ದಾಗಿದೆ ಮತ್ತು ವಸ್ತು ವಿಷಯವಾದ 'ಆದಿಕಾಲದಿಂದ ವರ್ತಮಾನ ಕಾಲದವರೆಗೆ ಮಾನವನ ಪ್ರಗತಿ'ಯ ಎರಡನೇ ಸಾಮರ್ಥ್ಯ ಸೂಚಿಸುತ್ತದೆ. (ಕನಿಷ್ಠ ಕಲಿಕಾ ಹಂತಗಳ ಪಟ್ಟಿ ಪುಟ ಸಂಖ್ಯೆ ೭೦ ನೋಡಿ)

ಪ್ರತಿಯೊಂದು ಸಾಮರ್ಥ್ಯ ಅಥವಾ ಉಪಸಾಮರ್ಥ್ಯವು ನಿರೀಕ್ಷಿತ ಕಲಿಕಾ ಫಲವನ್ನು ವಿವರಿಸುವ ಉದ್ದೇಶಿತ ಪಠ್ಯವಸ್ತುವನ್ನು ಸೂಚಿಸುತ್ತದೆ. ಈ ಅಂಶಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಪರಿಣಾಮಕಾರಿ ಹಾಗೂ ಆಕರ್ಷಕ ಬೋಧನ-ಕಲಿಕಾ ವಿಧಾನಗಳನ್ನು ಅನುಸರಿಸಬೇಕು. ಪರಿಸರ ಅಧ್ಯಯನದ ಬೋಧನಾ ತಂತ್ರಗಳು ಚಟುವಟಿಕೆ

ಆಧಾರಿತವಾಗಿರಬೇಕು. ಮಗುವಿಗೆ ತರಗತಿಯ ಒಳಗೆ ಮತ್ತು ಹೊರಗೆ ಸಾಕಷ್ಟು ಕಲಿಯುವ ಅವಕಾಶಗಳನ್ನು ಕಲ್ಪಿಸಿ ಕೊಡಬೇಕು. ತನ್ನ ನೈಸರ್ಗಿಕ ಮತ್ತು ಸಾಮಾಜಿಕ ಪರಿಸರವನ್ನು ಮಗುವು ವೀಕ್ಷಿಸಿ, ಅನ್ವೇಷಿಸಿ, ವಿಶ್ಲೇಷಿಸಿ, ವ್ಯಾಖ್ಯಾನಿಸಿ ಮೆಚ್ಚುವಂತಾಗಬೇಕು.

### ೧. ೧೦. ಕಲಿಕಾ ಕನಿಷ್ಠ ಹಂತಗಳ ಅನುಷ್ಠಾನಕ್ಕಾಗಿ ಕಾರ್ಯಯೋಜನೆ

ಪ್ರಾಥಮಿಕ ಶಾಲೆಗಳಲ್ಲಿ ಮತ್ತು ಅನೌಪಚಾರಿಕ ಶಿಕ್ಷಣ ಕೇಂದ್ರಗಳಲ್ಲಿ ಕಲಿಕಾ ಕನಿಷ್ಠ ಹಂತಗಳನ್ನು ಅನುಷ್ಠಾನಗೊಳಿಸುವಾಗ ಕಾರ್ಯತಂತ್ರಗಳನ್ನು ಎಚ್ಚರಿಕೆಯಿಂದ ರೂಪಿಸಬೇಕಾಗುತ್ತದೆ. ಇದರ ಪೂರ್ಣ ಅಳವಡಿಕಾ ಕಾರ್ಯ ಯೋಜನೆಯನ್ನು ಮೂರು ಅಥವಾ ಹೆಚ್ಚು ಹಂತಗಳಾಗಿ ವಿಭಜಿಸಬಹುದು. ಪೂರ್ಣಸಿದ್ಧತೆಯೊಂದಿಗೆ ಮೊದಲ ಹಂತದಲ್ಲಿ ಈ ಪಠ್ಯವಸ್ತು ಯೋಜನೆಯನ್ನು ಎರಡು ಅಥವಾ ಮೂರು ರಾಜ್ಯಗಳ ಆಯ್ದ ಜಿಲ್ಲೆಗಳಲ್ಲಿ ಅಥವಾ ತಾಲ್ಲೂಕುಗಳಲ್ಲಿ ಪ್ರಾಯೋಗಿಕವಾಗಿ ಅಳವಡಿಸಿಕೊಳ್ಳಬಹುದು. ಈ ಹಂತದಲ್ಲಿ ಶೈಕ್ಷಣಿಕ ಸಾಧನೆಯ ಮಟ್ಟವನ್ನು ಹೆಚ್ಚಿಸಲು ಕೆಲವು ಸಂಶೋಧನಾ ಕೇಂದ್ರಗಳಿಗೆ ಹಾಗೂ ಚಾಲ್ತಿಯಲ್ಲಿರುವ ಸುಧಾರಣಾ ಯೋಜನೆಗಳಿಗೆ ಕಲಿಕಾ ಕನಿಷ್ಠ ಹಂತದ ಮಾದರಿಗಳನ್ನು ಅನುಸರಿಸುವಂತೆ ಉತ್ತೇಜಿಸಬಹುದು. ಇದಲ್ಲದೆ ಆಯ್ದ ಶಾಲೆಗಳಲ್ಲಿ ಹಾಗೂ ಅನೌಪಚಾರಿಕ ಶಿಕ್ಷಣ ಕೇಂದ್ರಗಳಲ್ಲಿ ಕಲಿಕಾ ಕನಿಷ್ಠ ಹಂತಗಳನ್ನು ಅಳವಡಿಸಲು ವಿಶ್ವವಿದ್ಯಾಲಯಗಳು ಹಾಗೂ ಶಿಕ್ಷಣ ಮಹಾವಿದ್ಯಾಲಯಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಕೆಲವು ತಜ್ಞರಿಗೆ ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವಾಲಯವು ಉತ್ತೇಜನ ನೀಡಬಹುದು.

ಈ ಹಂತದ ಪ್ರಧಾನ ಉದ್ದೇಶಗಳೆಂದರೆ ಉದ್ದೇಶಿತ ಕಲಿಕಾ ಕನಿಷ್ಠ ಹಂತಗಳು ಔಪಚಾರಿಕ ಮತ್ತು ಅನೌಪಚಾರಿಕ ಶಿಕ್ಷಣ ವ್ಯವಸ್ಥೆಯಲ್ಲಿ ಹೇಗೆ ಕಾರ್ಯನಿರ್ವಹಿಸಬಲ್ಲವು? ಮಕ್ಕಳಲ್ಲಿ ನಿರೀಕ್ಷಿತ ಪ್ರಭುತ್ವ ಮಟ್ಟವನ್ನು ತಲುಪಲು ಶಿಕ್ಷಕರಿಗೆ ಯಾವ ರೀತಿಯ ಪ್ರಶಿಕ್ಷಣ ಮತ್ತು ಬೋಧನಾ ಸಾಮಗ್ರಿಗಳನ್ನು ಒದಗಿಸಬೇಕು? ಪ್ರಸ್ತುತ ಪಠ್ಯಪುಸ್ತಕದಲ್ಲಿ ಯಾವ ರೀತಿಯ ಪುನರ್ರಚನೆ ಮತ್ತು ಮಾರ್ಪಾಟಿನ ಅವಶ್ಯಕತೆಯಿದೆ? ವಿವಿಧ ಹಂತಗಳಲ್ಲಿ ಯಾವ ರೀತಿಯ ಕ್ರಿಯಾತ್ಮಕ ಮೌಲ್ಯಮಾಪನ ಮತ್ತು ಸಂಯೋಜನೆಯ ವಿಧಾನವನ್ನು ರೂಪಿಸಬಹುದು? ಕಲಿಕಾ ಸಾಧನೆಯ ಗುಣಮಟ್ಟವನ್ನು ವೃದ್ಧಿಸುವ ಅಂತಿಮ ಗುರಿಯನ್ನು ಮುಟ್ಟಲು ಯಾವ ಆಡಳಿತಾತ್ಮಕ ಮತ್ತು ಶೈಕ್ಷಣಿಕ ಕ್ರಮಗಳ ಅವಶ್ಯಕತೆ ಇದೆ? ಎಂಬುವೇ ಆಗಿವೆ. ಎರಡನೇ ಮತ್ತು ಮೂರನೇ ಹಂತಗಳು ಕಲಿಕಾ ಕನಿಷ್ಠ ಹಂತ ಮತ್ತು ಇತರೆ ಸಂಬಂಧಿತ ಅಂಶಗಳನ್ನು ಪರಿಷ್ಕರಿಸಿ, ಅನುಷ್ಠಾನಗೊಳಿಸಲು ಕ್ರಮಬದ್ಧವಾದ ವಿಸ್ತರಣಾ ಕಾರ್ಯಗಳನ್ನು ಹಮ್ಮಿಕೊಳ್ಳುವ ಗುರಿಯನ್ನು ಹೊಂದಿರಬೇಕು.

ಪ್ರಥಮ ಹಂತದಲ್ಲಿ ರಾಜ್ಯಗಳ ಆಯ್ದ ಜಿಲ್ಲೆ ಅಥವಾ ತಾಲ್ಲೂಕುಗಳ ಸಂಖ್ಯೆ ೪ ರಿಂದ ೬ಕ್ಕೆ ಮೀರಬಾರದು ಎಂದು ಉದ್ದೇಶಿಸಿದೆ. ಆದರೆ ಆಯ್ಕೆ ಮಾಡಿದ ತಾಲೂಕಿನಲ್ಲಿರುವ ಎಲ್ಲಾ ಪ್ರಾಥಮಿಕ ಶಾಲೆಗಳನ್ನು ಮತ್ತು ಅನೌಪಚಾರಿಕ ಶಿಕ್ಷಣ ಕೇಂದ್ರಗಳನ್ನು ಅನುಷ್ಠಾನಕ್ಕಾಗಿ ಆಯ್ಕೆ ಮಾಡಬೇಕಾಗುತ್ತದೆ. ಹೋಲಿಕೆಯ ಉದ್ದೇಶಕ್ಕಾಗಿ ಪಕ್ಕದ ಜಿಲ್ಲೆಗಳ ಅಥವಾ ತಾಲೂಕುಗಳ ಮಾಹಿತಿಯನ್ನು ಪಡೆದುಕೊಳ್ಳಬಹುದು. ಯಾವುದಕ್ಕೂ ಸಾಧನೆಯ ಹೆಗ್ಗುರುತನ್ನು ಗುರುತಿಸಲು ಪೂರ್ವಭಾವಿ ಪರೀಕ್ಷೆಯನ್ನು ನಡೆಸಬೇಕು. ಈ ಹಂತವನ್ನು ಪರಿಣಾಮಕಾರಿಯಾಗಿ ಮಾಡಲು ಅಗತ್ಯ ಪ್ರಾರಂಭಿಕ ಕ್ರಮಗಳನ್ನು ಸ್ಥಳೀಯ ಶಿಕ್ಷಕರ, ಮುಖ್ಯೋಪಾಧ್ಯಾಯರ, ಪರಿವೀಕ್ಷಕರ ಮತ್ತು ಸಮುದಾಯದ ಸದಸ್ಯರ ಪೂರ್ಣ ಪಾಲ್ಗೊಳ್ಳುವಿಕೆಯನ್ನು ಪಡೆಯಬೇಕು. ಔಪಚಾರಿಕ ಮತ್ತು ಅನೌಪಚಾರಿಕ ಶಿಕ್ಷಣ ಕೇಂದ್ರಗಳ ಜವಾಬ್ದಾರಿಯನ್ನು ನಿರ್ವಹಿಸುವ ಸ್ಥಳೀಯ ಸಂಸ್ಥೆಗಳ ಜೊತೆಗೆ ಜಿಲ್ಲಾ ಉಪನಿರ್ದೇಶಕರ ಕಛೇರಿ, ಜಿಲ್ಲಾ ಶಿಕ್ಷಣ ತರಬೇತಿ ಸಂಸ್ಥೆ (ಪ್ರಾರಂಭವಾಗಿರುವೆಡೆ), ಇತರೆ ಸಂಬಂಧಿಸಿದವರೊಳಗೊಂಡ ಜಿಲ್ಲಾ ಮಟ್ಟದ ಪ್ರಾಧಿಕಾರವು ಈ ಕಾರ್ಯಕ್ರಮದ ನಿರೂಪಣೆ, ನಿರ್ವಹಣೆ, ಹೊಂದಾಣಿಕೆ, ಅನುಷ್ಠಾನ ಮತ್ತು ಮೌಲ್ಯಮಾಪನಾ ಜವಾಬ್ದಾರಿಯನ್ನು ನಿರ್ವಹಿಸಬೇಕು.

ಅಂತಿಮವಾಗಿ ಈ ನವೀನ ಕಾರ್ಯಕ್ರಮದ ಕಾರ್ಯಾಚರಣೆಗೆ ಆಯಾ ಜಿಲ್ಲೆಯನ್ನು ಒಂದು ಘಟಕವನ್ನಾಗಿ ಮಾಡಬೇಕು. ಸ್ಥಳೀಯ ಮಟ್ಟದ ಅಧಿಕಾರಿಗಳು, ರಾಜ್ಯ ವಿದ್ಯಾ ಇಲಾಖೆ, ಶಿಕ್ಷಣ ತರಬೇತಿ ಮತ್ತು ಸಂಶೋಧನಾ ಸಂಸ್ಥೆ, ರಾಜ್ಯ ಮಟ್ಟದ ಅಧಿಕಾರಿಗಳು ಮತ್ತು ರಾಷ್ಟ್ರ ಮಟ್ಟದ ಅಧಿಕಾರಿಗಳ ಸಹಕಾರದೊಂದಿಗೆ ಸಿದ್ಧತೆ, ಸಂಯೋಜನೆ, ಅನುಷ್ಠಾನ, ಮೌಲ್ಯಮಾಪನ ಮತ್ತು ವಿಸ್ತರಣೆಯ ಮೂಲಕ ಈ ಘಟಕವು ಯೋಜನೆಯನ್ನು ಯಶಸ್ವಿಯಾಗಿ ನಿರ್ವಹಿಸಬಹುದು. ಅಂತಿಮ ವಿಶ್ಲೇಷಣೆಯಾಗಿ ರಾಷ್ಟ್ರೀಯ ಮಟ್ಟದಲ್ಲಿ ನಿರ್ಧರಿಸಲ್ಪಟ್ಟ ಕಲಿಕಾ ಕನಿಷ್ಠ ಹಂತದ ಕನಿಷ್ಠ ಅವಶ್ಯಕ ಸಾಧನಾಮಟ್ಟವನ್ನು ಆದಷ್ಟು ಜಾಗ್ರತೆಯಾಗಿ ಪ್ರತಿ ಜಿಲ್ಲೆಯಲ್ಲಿ ಸಾಧಿಸಬೇಕು. ಕೆಲವು ಜಿಲ್ಲೆ ಮತ್ತು ಅವುಗಳಲ್ಲಿನ ಶಾಲೆಗಳು ತಮ್ಮದೇ ಆದ ಕಾಲಮಿತಿ ಮತ್ತು ಸಂಪನ್ಮೂಲಗಳ ಅವಶ್ಯಕತೆಯ ಕಾರಣಗಳಿಂದ ಹಿಂದೆ ಉಳಿಯಬಹುದು. ಆದರೆ ಅವುಗಳು ಕಲಿಕಾ ಕನಿಷ್ಠ ಹಂತಗಳನ್ನು ತಲುಪಲು ತಮ್ಮದೇ ಆದ ಮಾಧ್ಯಮಾವಧಿ ಹಂತಗಳನ್ನು (Intermediate phase) ನಿಗದಿಪಡಿಸಿಕೊಳ್ಳಬಹುದು. ಈ ಬಗ್ಗೆ ತೆಗೆದುಕೊಳ್ಳಲಾದ ಅವಧಿಯನ್ನು ಸ್ಥಳೀಯವಾಗಿ ನಿರ್ಧರಿಸಬೇಕು. ಒಟ್ಟಿನಲ್ಲಿ ನಿರ್ಧರಿಸಲ್ಪಟ್ಟ ಕೆಲವು ವರ್ಷಗಳ ಅವಧಿಯಲ್ಲಿ ಒಂದು ರಾಜ್ಯದ ಎಲ್ಲಾ ಜಿಲ್ಲೆಗಳು ಮತ್ತು ರಾಷ್ಟ್ರದ ಎಲ್ಲಾ ರಾಜ್ಯಗಳೂ ಎಲ್ಲಾ ಮಕ್ಕಳಿಗೆ ಅನ್ವಯವಾಗುವಂತೆ ಕಲಿಕಾ ಕನಿಷ್ಠ ಹಂತದಲ್ಲಿ ನಿಗದಿಪಡಿಸಿದ ಗುರಿಯನ್ನು ಸಾಧಿಸುವಂತಿರಬೇಕು. ಆಂಧ್ರಪ್ರದೇಶ, ಬಿಹಾರ, ಒರಿಸ್ಸಾ, ರಾಜಸ್ಥಾನ ಹಾಗೂ ಉತ್ತರ

ಪ್ರದೇಶ ರಾಜ್ಯಗಳಲ್ಲಿ ಅನುಷ್ಠಾನಗೊಳಿಸಲಾದ ಹಾಗೂ ಕಾರ್ಯಾಚರಣೆಗೆ ತರಲು ಉದ್ದೇಶಿಸಿದ ವಿಶೇಷ ಕಾರ್ಯಕ್ರಮಗಳ ಮತ್ತು ಯೋಜನೆಗಳಡಿಯಲ್ಲಿ ಒದಗಿಸಲಾದ ಸಂಪನ್ಮೂಲಗಳನ್ನು ಆಯಾ ಜಿಲ್ಲೆಗಳ ಎಲ್ಲಾ ಶಾಲೆಗಳಲ್ಲಿ ಕನಿಷ್ಠ ಕಲಿಕಾ ಹಂತಗಳ ಯಶಸ್ವಿ ಅಳವಡಿಕೆಗೆ ಬಳಸಿಕೊಳ್ಳಬಹುದು.

ಈ ಕಾರ್ಯಕ್ರಮದಲ್ಲಿ ಕೇಂದ್ರ ಬಿಂದುವಾದ ಶಿಕ್ಷಕನಿಗೆ ನೆರವು ನೀಡಲು ವಿವಿಧ ಪಠ್ಯಕ್ರಮಗಳಿಗೆ ಅನುಗುಣವಾಗಿ ಶಿಕ್ಷಕರ ಕೈಪಿಡಿಗಳನ್ನು ರಚಿಸುವುದು ಅಗತ್ಯವಾಗಿದೆ. ಈ ಕೈಪಿಡಿಗಳು ಕಲಿಕಾ ಕನಿಷ್ಠ ಹಂತಕ್ಕೆ ಸಂಬಂಧಿಸಿದಂತೆ ವಿವರಣಾ ಟಿಪ್ಪಣಿಗಳಿಂದ ಮತ್ತು ಸಚಿತ್ರವಾದ ವಿವರಣೆಗಳಿಂದ ಕೂಡಿರಬೇಕು. ಈ ಕೈಪಿಡಿಗಳು ಪರಿಣಾಮಕಾರಿ ಬೋಧನೆಗೆ ಮತ್ತು ಮೌಲ್ಯಮಾಪನಕ್ಕೆ ಶಿಕ್ಷಕರಿಗೆ ಸಹಾಯ ಮಾಡುವಂತಿರಬೇಕು. ಈ ವಿಧಾನಕ್ಕೆ ಸಂಬಂಧಿಸಿದಂತೆ ಪಠ್ಯಪುಸ್ತಕಗಳನ್ನು ಪರಿಷ್ಕರಿಸುವವರೆಗೆ ಈಗಿರುವ ಪಠ್ಯಪುಸ್ತಕಗಳನ್ನು ಉಪಯೋಗಿಸಿ ಕಲಿಕಾ ಕನಿಷ್ಠ ಹಂತಗಳನ್ನು ಹೇಗೆ ಸಾಧಿಸಬೇಕೆಂಬ ಸಾಮಗ್ರಿಗಳು ಮತ್ತು ಚಟುವಟಿಕೆ ಆಧಾರಿತ ವಿಧಾನಗಳನ್ನು ಹೇಗೆ ಅನುಸರಿಸಬೇಕು ಎಂಬ ಬಗ್ಗೆ ಸಲಹೆಗಳು ಇದ್ದರೆ ವಿದ್ಯಾರ್ಥಿಯ ಕಲಿಕೆಯನ್ನು ಅರ್ಥಪೂರ್ಣ, ಪರಿಣಾಮಕಾರಿ ಮತ್ತು ಹರ್ಷದಾಯಕವನ್ನಾಗಿ ಮಾಡಬಹುದು. ಪ್ರಾಥಮಿಕ ಶಾಲಾ ಶಿಕ್ಷಕರ ಹಾಗೂ ಅನೌಪಚಾರಿಕ ಶಿಕ್ಷಣ ಕೇಂದ್ರಗಳ ಬೋಧಕರ ಕೈಪಿಡಿಗಳ ಜೊತೆಗೆ ಪರಿವೀಕ್ಷಕರಿಗೆ ಮತ್ತು ಇತರೆ ಸ್ಥಳೀಯ ಕಾರ್ಯಕರ್ತರುಗಳಿಗೆ ತಮ್ಮ ಕಾರ್ಯದಕ್ಷತೆಯನ್ನು ಹೆಚ್ಚಿಸಿಕೊಳ್ಳಲು ನೆರವಾಗುವಂತೆ ಕಲಿಕಾ ಕನಿಷ್ಠ ಹಂತಗಳ ಬಗ್ಗೆ ಕೈಪಿಡಿಗಳನ್ನು ತಯಾರಿಸಬೇಕು.

ರಾಷ್ಟ್ರವ್ಯಾಪಿಯಾಗಿ ಕಲಿಕಾ ಕನಿಷ್ಠ ಹಂತದ ಕರಡನ್ನು ಸಿದ್ಧಪಡಿಸಿದ್ದರೂ ಸಹ ಸ್ಥಳೀಯ ಅಗತ್ಯತೆ, ಅವುಗಳ ಸುಸಂಬದ್ಧತೆ ಹಾಗೂ ಕಾರ್ಯರೂಪತೆಯನ್ನು ಸಾಧಿಸುವ ಉದ್ದೇಶದಿಂದ ಸ್ಥಳೀಯ ಉದಾಹರಣೆಗಳನ್ನು, ಸಾಮಗ್ರಿಗಳನ್ನು ಮತ್ತು ಪರಿಸರವನ್ನು ಬಳಸಿಕೊಳ್ಳುವ ಪೂರ್ಣಅವಕಾಶವಿದೆ. ಈ ನಿರ್ದಿಷ್ಟ ಅಂಶವನ್ನು ಕೈಪಿಡಿಯಲ್ಲಿ ಸ್ಪಷ್ಟವಾಗಿ ತೋರಿಸುವುದರಿಂದ ರಾಷ್ಟ್ರೀಯ ಪಠ್ಯವಸ್ತು ಚೌಕಟ್ಟಿನೊಳಗೆ ಗರಿಷ್ಠ ವಿಕೇಂದ್ರೀಕರಣವನ್ನು ಸಾಧಿಸಬಹುದಾಗಿದೆ. ಹೆಚ್ಚಾಗಿ ಕಲಿಕಾ ಕನಿಷ್ಠ ಹಂತವನ್ನು ಜಾರಿಗೊಳಿಸುವ ಸಲುವಾಗಿ ಏರ್ಪಡಿಸಲಾಗುವ ಶಿಕ್ಷಕರ ತರಬೇತಿ, ಪುನರ್‌ತರಬೇತಿ ಅವಧಿಯಲ್ಲಿ ಈ ಅಂಶಕ್ಕೆ ಸಾಕಷ್ಟು ಒತ್ತುಕೊಡಬೇಕು. ಕಾಲಾನುಕ್ರಮದಲ್ಲಿ ಕಲಿಕಾ ಕನಿಷ್ಠ ಹಂತದಲ್ಲಿ ನಿಗದಿಯಾದ ನಿರ್ದಿಷ್ಟ ಸಾಮರ್ಥ್ಯಗಳ ಆಧಾರದ ಮೇಲೆ ಪಠ್ಯಪುಸ್ತಕ ಸಾಮಗ್ರಿಗಳು, ವಿದ್ಯಾರ್ಥಿ ಅಭ್ಯಾಸ ಪುಸ್ತಕಗಳು, ಘಟಕವಾರು ಮೌಲ್ಯಮಾಪನ, ಅಭ್ಯಾಸ ಪತ್ರಿಕೆಗಳು ಹಾಗೂ ಪುಷ್ಟೀಕರಿಸುವ ಸಾಮಗ್ರಿಗಳನ್ನು ಕುರಿತಂತೆ ಸಮಗ್ರ ಬೋಧನಾ ಸಾಮಗ್ರಿಗಳನ್ನು ತಯಾರಿಸಬಹುದಾಗಿದೆ. ಈ ಹಿನ್ನೆಲೆಯಲ್ಲಿ ವಯಸ್ಕರ ಶಿಕ್ಷಣ ಕಾರ್ಯಕ್ರಮದಡಿಯಲ್ಲಿ ತಯಾರಿಸಲಾಗಿರುವ ಆರಂಭದ ಪಠ್ಯಪುಸ್ತಕಗಳನ್ನು ಪರಿಶೀಲಿಸುವುದು ಸೂಕ್ತ.

ಪ್ರತ್ಯೇಕವಾಗಿ ಪ್ರಸ್ತಾಪಿಸಿದಂತೆ ಅನುಷ್ಠಾನದ ಪ್ರಥಮ ಹಂತದಿಂದ ಪ್ರಾರಂಭವಾಗುವ ನಿರಂತರ ಹಾಗೂ ವ್ಯಾಪಕ ಮೌಲ್ಯಮಾಪನಾ ವಿಧಾನವನ್ನು ಗುಣಮಟ್ಟ ಕಾಯ್ದುಕೊಳ್ಳುವ ಸಲುವಾಗಿ ಕಲಿಕಾ ಕನಿಷ್ಠ ಹಂತದ ಅವಿಭಾಜ್ಯ ಅಂಗ ವನ್ನಾಗಿಸಬೇಕು. ಪ್ರಗತಿಯ ಬಗ್ಗೆ ನಿಗಾ ಇಡಲು ಪೂರ್ವಪರೀಕ್ಷೆ ಮತ್ತು ಪೂರ್ವೋತ್ತರ ಪರೀಕ್ಷೆ, ಪರಿಹಾರ ಪರೀಕ್ಷೆ, ಪರಿಹಾರ ಬೋಧನೆ, ಪ್ರಭುತ್ವ ಕಲಿಕೆ ಮತ್ತು ಒರೆಆಧಾರಿತ ಮೌಲ್ಯಮಾಪನಗಳನ್ನು (Criterion-referenced evaluation) ಒಳಗೊಂಡಂತೆ ಬೋಧನೆ ಮತ್ತು ಮೌಲ್ಯಮಾಪನ ಕಾರ್ಯಗಳು ಒಂದಕ್ಕೊಂದು ಹೊಂದಿ ಕೊಂಡಂತಿರಬೇಕು. ಈ ಉದ್ದೇಶಗಳಿಗಾಗಿ ಘಟಕ ಪರೀಕ್ಷೆ ಹಾಗೂ ಇತರೇ ಮೌಲ್ಯಮಾಪನಾ ಸಾಧನಗಳಿಂದ ಶಬ್ದ ಸಂಪತ್ತಿನ ಪರೀಕ್ಷೆ, ಉಕ್ತಲೇಖನ, ಮನಸ್ಸಿನಲ್ಲಿ ಮಾಡಬಲ್ಲ ಗಣಿತ ಹಾಗೂ ಅನ್ವಯ ಪರೀಕ್ಷೆಗಳಂತಹ ಪರೀಕ್ಷಾ ಅಂಶಗಳ (Test items) ಒಂದು ದೊಡ್ಡ ಕೂಡು ನಿಧಿ(Poolex)ಯನ್ನು ತಯಾರಿಸಿ ಒದಗಿಸುವ ಮೂಲಕ ಶಿಕ್ಷಕರ ದುಡಿಮೆಯು ಹೆಚ್ಚು ದಕ್ಷ ಹಾಗೂ ಪರಿಣಾಮಕಾರಿಯಾಗಲು ನೆರವಾಗುವಂತೆ ಮಾಡಬೇಕು. ಅದೇ ರೀತಿಯಲ್ಲಿ ಮೇಲ್ವಿಚಾರಕರು ವಿದ್ಯಾರ್ಥಿಗಳನ್ನು ಸ್ಥಳದಲ್ಲೇ ಪರೀಕ್ಷಿಸಲು, ಜಿಲ್ಲಾ ಮಟ್ಟದ ಅಧಿಕಾರಿಗಳು ವಿದ್ಯಾರ್ಥಿಗಳ ಅರ್ಹತೆಗಳನ್ನು ಹೋಲಿಸಲು ಅಥವಾ ಅಂಥವೇ ಇತರ ಉದ್ದೇಶಗಳಿಗಾಗಿ ಈ ಕೂಡುನಿಧಿ ಪರೀಕ್ಷಾ ಸಾಮಗ್ರಿಗಳು ನೆರವಾಗುತ್ತವೆ.

ಮೊದಲನೆಯ ಹಂತ ಪ್ರಾರಂಭವಾಗುವ ಮೊದಲು ಕಲಿಕಾ ಕನಿಷ್ಠ ಹಂತದ ಕೈಪಿಡಿಗಳು, ಪಠ್ಯ ಸಾಮಗ್ರಿಗಳು ಮತ್ತು ವಿಷಯ ಕೂಡುನಿಧಿಗಳ ಆಧಾರದ ಮೇಲೆ ಶಿಕ್ಷಕರಿಗೆ ಸೂಕ್ತ ತರಬೇತಿ ಕಾರ್ಯಕ್ರಮವನ್ನು ರೂಪಿಸಬೇಕು. ಅಂತೆಯೇ ಇದನ್ನು ವಿಸ್ತರಣೆ ಕಾರ್ಯಕ್ರಮದ ಅಂಗವಾಗಿ ಎರಡು ಮತ್ತು ಮೂರನೇ ಹಂತವನ್ನು ಪ್ರಾರಂಭಿಸುವ ಮುನ್ನ ಪುನರಾವರ್ತನೆ ಮಾಡಬೇಕು. ಇಂತಹದೇ ತರಬೇತಿಯನ್ನು ಮೇಲ್ವಿಚಾರಕರು ಹಾಗೂ ಇತರೇ ಸಿಬ್ಬಂದಿಯವರಿಗೆ ಅವರ ನಿರ್ದಿಷ್ಟ ಕರ್ತವ್ಯಗಳ ನಿರ್ವಹಣೆ ಬಗ್ಗೆ ನೀಡಬೇಕಾಗುವುದು. ಈ ಎಲ್ಲಾ ಕಾರ್ಯನಿರ್ವಾಹಕರುಗಳಿಗೆ ವ್ಯವಸ್ಥಿತ ರೀತಿಯಲ್ಲಿ ಸಂಚಿತ ತರಬೇತಿ ಕಾರ್ಯಕ್ರಮಗಳನ್ನು ಅನುಷ್ಠಾನದ ಪೂರ್ಣಾವಧಿಗೆ ಅತಿಜಾಗರೂಕತೆಯಿಂದ ರೂಪಿಸಿ ನೀಡಬೇಕು. ಈ ತರಬೇತಿಯು ಅಲ್ಪಾವಧಿಯದಾಗಿದ್ದು ಕಾರ್ಯನಿಷ್ಠ ಮತ್ತು ಕ್ರಿಯಾತ್ಮಕವಾಗಿರಬೇಕು.

ವಿವಿಧ ರೀತಿಯಲ್ಲಿ ಸ್ಥಳೀಯ ಸಮುದಾಯವನ್ನು ಕ್ರಿಯಾತ್ಮಕವಾಗಿ ತೊಡಗಿಸುವಂತೆ ಕ್ರಮತೆಗೆದುಕೊಳ್ಳಬೇಕು. ಎಲ್ಲಿ ಸ್ಥಳೀಯ ಶಿಕ್ಷಣ ಸಮಿತಿಗಳು ಅಸ್ತಿತ್ವದಲ್ಲಿವೆಯೋ ಅಲ್ಲಿ ಅವುಗಳ ಸಹಕಾರ ಮತ್ತು ಸಕ್ರಿಯ ಪಾಲ್ಗೊಳ್ಳುವಿಕೆ ಯನ್ನು ಪಡೆದು ಅಂದರೆ ಮುಖ್ಯವಾಗಿ ಶಾಲೆಗೆ ಸರಿಯಾಗಿ ಬಾರದಿರುವ ಮಕ್ಕಳ (ಇತರರನ್ನೊಳಗೊಂಡಂತೆ)

ಪೋಷಕರೊಂದಿಗೆ ಸಂಪರ್ಕ ಹೊಂದಿ ಅವರು ಮಕ್ಕಳನ್ನು ಶಾಲೆಗೆ ನಿಯಮಿತವಾಗಿ ಕಳಿಸಲು ಪ್ರೇರೇಪಿಸಿ, ಅಂತಹ ಮಕ್ಕಳು ಕಲಿಕಾ ಕನಿಷ್ಠ ಹಂತದಲ್ಲಿ ನಿರೂಪಿಸಿರುವ ಕನಿಷ್ಠ ಮಟ್ಟದ ಸಾಧನೆಯನ್ನು ಪಡೆಯುವಲ್ಲಿ ಹಿಂದೆ ಬೀಳದಂತೆ ನೋಡಿಕೊಳ್ಳಬೇಕು. ಸ್ಥಳೀಯವಾಗಿ ಅಥವಾ ಆಸುಪಾಸಿನಲ್ಲಿ ಸ್ವಯಂಸೇವಾ ಸಂಸ್ಥೆಗಳು ಅಥವಾ ಕಾರ್ಯಕರ್ತರಿದ್ದಲ್ಲಿ ಶಾಲೆಯ ಗುಣಮಟ್ಟ ಏರಿಸುವ ಸಲುವಾಗಿ ಅವರ ಸಹಕಾರ ಮತ್ತು ಮಾರ್ಗದರ್ಶನ ಪಡೆಯುವುದನ್ನು ಪರಿಶೀಲಿಸಬಹುದು. ಅಂತಹ ಸಂಸ್ಥೆಗಳು ಹಾಗೂ ವ್ಯಕ್ತಿಗಳು ಇತರರ ಜೊತೆಗೆ ನಿವೃತ್ತ ಶಿಕ್ಷಕರು ಅಥವಾ ಇತರ ವೃತ್ತಿ ನಿರತರು, ಹತ್ತಿರದ ಪ್ರಾಥಮಿಕ ಅಥವಾ ಪ್ರೌಢ ಹಂತದ ಪ್ರಶಿಕ್ಷಕರು ಆರೋಗ್ಯಕಾರ್ಯಕರ್ತರು, ಹಳ್ಳಿಯಲ್ಲಿನ ಇತರರು ಕಾಲಕಾಲಕ್ಕೆ ಶಾಲೆ ಅಥವಾ ಅನೌಪಚಾರಿಕ ಶಿಕ್ಷಣ ಕೇಂದ್ರಗಳಿಗೆ ತಮ್ಮ ಸಹಾಯ ಹಸ್ತವನ್ನು ನೀಡಬಹುದು. ಸಂಗ್ರಹಿಸಿ ಹೇಳುವುದಾದರೆ ಕಲಿಕಾ ಕನಿಷ್ಠ ಹಂತದ ಪರಿಣಾಮಕಾರಿ ಅನುಷ್ಠಾನಕ್ಕಾಗಿ ಸ್ಥಳೀಯವಾಗಿ ಲಭ್ಯವಿರುವ ಭೌತಿಕ, ಆರ್ಥಿಕ ಮತ್ತು ಮಾನವ ಸಂಪನ್ಮೂಲಗಳನ್ನು ಗರಿಷ್ಠವಾಗಿ ಬಳಸಿಕೊಳ್ಳಬೇಕು.

ಅಂತೆಯೇ ಪರಸ್ಪರ ಬಲಪಡಿಸುವ ಹಾಗೂ ಆಂತರಿಕ ಬೆಂಬಲಗಳಿಸುವ ಉದ್ದೇಶದಿಂದ ಸಾಧ್ಯವಿರುವ ಕಡೆಗಳಲ್ಲೆಲ್ಲಾ ಶಾಲೆಗಳನ್ನು ಸೇರಿಸಿ. ಶಾಲಾ ಸಮೂಹಗಳು ಅಥವಾ ಸಂಕೀರ್ಣಗಳನ್ನು ಪ್ರಾರಂಭಿಸಬಹುದು. ಅರವತ್ತರ ದಶಕದಲ್ಲಿ ಶಿಕ್ಷಣ ಆಯೋಗವು ಸೂಚಿಸಿದಂತೆ ಶಾಲಾ ಸಂಕೀರ್ಣಗಳು ಅನುಭವಗಳನ್ನು ಹಾಗೂ ಸಾಮಗ್ರಿಗಳನ್ನು ಉಪಯೋಗಿಸುವಲ್ಲಿ ಸಹಕಾರ ನೀಡುವುದರಿಂದ ಬೋಧನೆ, ಮೌಲ್ಯಮಾಪನ ಮತ್ತು ಸಂಯೋಜನೆಯ ಹಲವು ಸಮಸ್ಯೆಗಳನ್ನು ನಿವಾರಿಸುವುದರ ಜೊತೆಗೆ ಪರೀಕ್ಷಾ ಸಾಮಗ್ರಿಗಳನ್ನು ತಯಾರಿಸಲು ಪರಿಹಾರ ವಿಧಾನಗಳನ್ನು ಸೂಚಿಸಿ ಕಾಲ ಮತ್ತು ವೆಚ್ಚವನ್ನು ತಗ್ಗಿಸಿ ಕಲಿಕಾ ವಿಧಾನದ ಗುಣಮಟ್ಟವನ್ನು ಉತ್ತಮಪಡಿಸಲು ಒಂದಕ್ಕೊಂದು ನೆರವಾಗುವುವು. ಶಾಲಾ ಸಂಕೀರ್ಣ ವಿಧಾನಗಳನ್ನು ಅನುಸರಿಸಿದಲ್ಲಿ ಇಂತಹ ಸಮೂಹಗಳ ವ್ಯಾಪ್ತಿಯನ್ನು, ಕಾರ್ಯ ನಿರ್ವಹಣೆಗೆ ಅನುಕೂಲವಾಗುವಂತೆ ತಾಲೂಕಿನೊಳಗೆ ಆಯಕಟ್ಟಿನ ಪ್ರದೇಶಗಳಲ್ಲಿನ ಶಾಲೆಗಳನ್ನು ೫ ರಿಂದ ೧೦ಕ್ಕೆ ಸೀಮಿತಗೊಳಿಸಬೇಕು. ಗುರುತಿಸಿದ ಅಗತ್ಯತೆಗಳ ಗುರಿಯನ್ನು ಸಾಧಿಸಲು ಸಹಕಾರ ನೀಡುವ ಸಲುವಾಗಿ ಶಿಕ್ಷಕರು ಹಾಗೂ ಮುಖ್ಯೋಪಾಧ್ಯಾಯರು, ತಮ್ಮದೇ ಆದ ಸಮಿತಿಗಳನ್ನು ರಚಿಸಿಕೊಳ್ಳಬಹುದು.

ಅನುಷ್ಠಾನ ತಂತ್ರವು ಪರಿಣಾಮಕಾರಿಯಾಗಲು ಮತ್ತು ಅದರ ನಾಯಕತ್ವಕ್ಕಾಗಿ ಸೂಕ್ತ ಸಂಪನ್ಮೂಲ ವ್ಯವಸ್ಥೆ ಅಗತ್ಯ. ಇದನ್ನು ಜಿಲ್ಲಾ ಮಟ್ಟದಲ್ಲಿ ಸ್ಥಾಪಿಸತಕ್ಕದ್ದು. ಪ್ರಾರಂಭಿಕ ಹಂತದಲ್ಲಿ ಸಾಕಷ್ಟು ಪೂರ್ವಸಿದ್ಧತೆಯನ್ನು ಮಾಡಿಕೊಂಡು ವಿವರವಾದ ಅನುಷ್ಠಾನದ ಕಾರ್ಯಕ್ರಮಗಳನ್ನು ರೂಪಿಸಿ, ಅಗತ್ಯವಿರುವ ಆರ್ಥಿಕ ಆಯವ್ಯಯವನ್ನು ನಿಗದಿಪಡಿಸಿಕೊಳ್ಳಬೇಕು. ತರಬೇತಿ ಸಾಮಗ್ರಿಗಳು, ಪೂರ್ವಪರೀಕ್ಷೆ ಮತ್ತು ಪೂರ್ವೋತ್ತರ ಪರೀಕ್ಷೆಗಾಗಳಿಗಾಗಿ

ಮೌಲ್ಯಮಾಪನಾ ಸಲಕರಣೆಗಳು ಎಲ್ಲರಲ್ಲೂ ಮೂಡಿದ ಉತ್ಸಾಹ ಮತ್ತು ಕಾಲಕಾಲಕ್ಕೆ ಬರಬಹುದಾದ ತೊಂದರೆಗಳ ನಿವಾರಣೆ ಮುಂತಾದ ಎಲ್ಲ ಕ್ರಮಗಳ ಸಹಾಯದಿಂದ ಯೋಜನೆಯ ಅನುಷ್ಠಾನ ಕಾರ್ಯವು ಪೂರ್ಣ ಪ್ರಮಾಣದಲ್ಲಿ ಭರದಿಂದ ಮುಂದೆ ಸಾಗುವಂತೆ ಮಾಡಬಹುದು. ಈ ವಿಧಾನವು ಪ್ರಥಮ ಹಂತದ ಅಂತ್ಯದಲ್ಲಿ ಕಲಿಕಾ ಕನಿಷ್ಠ ಹಂತದ ಕಾರ್ಯಕ್ರಮ ಜಾರಿ ಕುರಿತು ಸಂಯೋಜನಾ ಕಾರ್ಯ ನಡೆಸುವ ಜವಾಬ್ದಾರಿಯನ್ನು ಹೊಂದಿರುತ್ತದೆ.

ರಾಷ್ಟ್ರಮಟ್ಟದಲ್ಲಿ ಕೇಂದ್ರ ಸರ್ಕಾರದ ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವಾಲಯದ ಶಿಕ್ಷಣ ಇಲಾಖೆ (MHRD)ಯು ರಾಷ್ಟ್ರೀಯ ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿ ಮಂಡಳಿ (NCERT), ರಾಷ್ಟ್ರೀಯ ಯೋಜನೆ ಮತ್ತು ಆಡಳಿತ ಸಂಸ್ಥೆ (NIEPA) ರಾಷ್ಟ್ರೀಯ ಮೌಲ್ಯಮಾಪನಾ ಸಂಸ್ಥೆ(NEO)ಗಳೊಂದಿಗೆ ಈ ಕಾರ್ಯಕ್ರಮಗಳು ಜಾರಿಯಲ್ಲಿ ಪ್ರಧಾನ ಪಾತ್ರವಹಿಸಬೇಕು. ಇತರೆ ಕಾರ್ಯಗಳ ಜೊತೆಗೆ ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವಾಲಯವು ಈ ಕೆಳಕಂಡ ಜವಾಬ್ದಾರಿಯನ್ನು ನಿರ್ವಹಿಸಬೇಕೆಂದು ಶಿಫಾರಸ್ಸು ಮಾಡಲಾಗಿದೆ.

'ಸರ್ವರಿಗೂ ಶಿಕ್ಷಣ' ಮತ್ತು ರಾಷ್ಟ್ರೀಯ ಕಾರ್ಯಕ್ರಮವಾದ ಪ್ರಾಥಮಿಕ ಶಿಕ್ಷಣ ಸಾರ್ವತ್ರೀಕರಣ ಅಂಗವಾಗಿ ಈ ಕಾರ್ಯಕ್ರಮದಡಿಯಲ್ಲಿ ಸಮಾನತ್ವದ ಜೊತೆಗೆ ಗುಣಮಹತ್ವದ ಕಾರ್ಯದಲ್ಲಿ ಜಿಲ್ಲಾ ಮತ್ತು ರಾಜ್ಯ ಶಿಕ್ಷಣ ಇಲಾಖೆಯ ಪ್ರಾಧಿಕಾರಗಳೊಡನೆ ಸಮನ್ವಯ ಸಾಧಿಸುವ ಕಾರ್ಯವನ್ನು ನಿರ್ವಹಿಸಬೇಕು. ರಾಷ್ಟ್ರೀಯ ಶಿಕ್ಷಣ ಸಚಿವಾಲಯವು ವಿವಿಧ ಸಂಸ್ಥೆಗಳ ನೆರವಿನಿಂದ ಇದಕ್ಕೆ ಅಗತ್ಯವಾಗಿರುವ ಸಂಪನ್ಮೂಲ ಸಂಗ್ರಹಣೆಯ ಕಾರ್ಯ ನಿರ್ವಹಿಸುವುದರ ಜೊತೆಗೆ ಸಂಬಂಧಿಸಿದ ಜನರನ್ನು ಪ್ರೇರೇಪಿಸಿ, ಮೊದಲನೆ ಹಾಗೂ ಅನಂತರದ ಹಂತಗಳಲ್ಲಿ ಕಲಿಕಾ ಕನಿಷ್ಠ ಹಂತಗಳನ್ನು ಎಲ್ಲಾ ಪ್ರಾಥಮಿಕ ಶಾಲೆಗಳಲ್ಲಿ ಮತ್ತು ಅನೌಪಚಾರಿಕ ಶಿಕ್ಷಣ ಕೇಂದ್ರಗಳಲ್ಲಿ ಒಂದು ಕಾಲಮಿತಿಯ ಕಾರ್ಯಕ್ರಮವಾಗಿ ಅಳವಡಿಸಲು ಅಗತ್ಯವಾದ ರಾಜಕೀಯ ಇಚ್ಛಾಶಕ್ತಿ (Political Will) ಉಂಟಾಗುವುದನ್ನು ಖಚಿತಪಡಿಸಿಕೊಳ್ಳಬೇಕು.

ರಾಷ್ಟ್ರೀಯ ಮಟ್ಟದಲ್ಲಿ ಈ ಕಾರ್ಯಕ್ರಮದ ಅನುಷ್ಠಾನದ ಪ್ರಗತಿಯನ್ನು ನಿಯಮಿತವಾಗಿ ಪರಾಮರ್ಶಿಸಿ ಅಂತಿಮ ಗುರಿಯಾದ ಎಲ್ಲಾ ಮಕ್ಕಳ ಶಿಕ್ಷಣ ಗುಣಮಟ್ಟ ಮತ್ತು ಸಾಧಿಸಲು ಅಗತ್ಯವಾದ ಕೆಲವು ಬದಲಾವಣೆಯನ್ನು ಮಾಡಲು ಕ್ರಮಕೈಗೊಳ್ಳಬೇಕು. ಸಚಿವಾಲಯವು ಈ ಗುರಿ ಸಾಧನೆಗಾಗಿ ಭಾಷೆ, ಗಣಿತ ಮತ್ತು ಪರಿಸರ ಅಧ್ಯಯನದ ಮೂಲಭೂತ ಕಲ್ಪನೆ ಕುರಿತು ಸಾಧನೆಯ ಸಮೀಕ್ಷೆಗಳನ್ನು (ಸಾಮಾಜಿಕ ಪೌರಸೌಲಭ್ಯ ಮತ್ತು ವೈಜ್ಞಾನಿಕ ವಿಷಯಗಳಿಗೆ ಸಂಬಂಧಿಸಿದಂತೆ) ನಡೆಸಬೇಕು. ಅವುಗಳಲ್ಲಿ ಕಂಡು ಬಂದ ಲೋಪದೋಷಗಳನ್ನು ಜಿಲ್ಲೆಗಳ ನಡುವೆ, ರಾಜ್ಯಗಳ ನಡುವೆ ಗ್ರಾಮೀಣ ಹಾಗೂ ನಗರ ಪ್ರದೇಶಗಳ ನಡುವೆ ಇರುವ ವಿದ್ಯಾರ್ಥಿಗಳ ಗುಣಮಟ್ಟದಲ್ಲಿನ ಅಸಮತೆಗಳನ್ನು ನಿವಾರಿಸಲಾಗದಿದ್ದಲ್ಲಿ ಆದಷ್ಟು ಕಡಿಮೆ ಮಾಡುವಲ್ಲಿ ಅನುಸರಣಾ (Follow up) ಕಾರ್ಯಗಳನ್ನು ಕೈಗೊಳ್ಳಬೇಕು. ಈ ಕಾರ್ಯ ನಿರ್ವಹಣೆಗಾಗಿ ಆದಷ್ಟು ಜಾಗ್ರತೆ ರಾಷ್ಟ್ರೀಯ ಮೌಲ್ಯಮಾಪನಾ ಸಂಸ್ಥೆಯನ್ನು ಪ್ರಾರಂಭಿಸಬೇಕು.

ಪ್ರಾಥಮಿಕ ಹಂತದಲ್ಲಿ ಕಲಿಕಾ ಕನಿಷ್ಠ ಹಂತ ನಿಗದಿಪಡಿಸುವ ಕಾರ್ಯ ಮುಗಿದ ನಂತರ ರಾಷ್ಟ್ರೀಯ ಶಿಕ್ಷಣ ಸಚಿವಾಲಯವು ಕೂಡಲೇ ಇಂತಹ ಹಂತವನ್ನು ೫ ರಿಂದ ೭ನೇ ತರಗತಿಗಳ ಹಿರಿಯ ಪ್ರಾಥಮಿಕ ಹಂತಕ್ಕೆ ನಿಗದಿಪಡಿಸುವ ಕಾರ್ಯವನ್ನು ಪ್ರಾರಂಭಿಸಬೇಕು. ಇಲ್ಲದಿದ್ದಲ್ಲಿ ಮೊದಲಿನ ಐದು ವರ್ಷಗಳಲ್ಲಿ ಮಾಡಲಾದ ಕಾರ್ಯವು ಅಪೂರ್ಣ ವಾಗುವುದರ ಜೊತೆಗೆ ಹೆಚ್ಚು ಲಾಭದಾಯಕವಾಗದು. ಈ ಕಾರ್ಯವು ಕಾಲಾನುಕ್ರಮದಲ್ಲಿ ೮, ೯ ಮತ್ತು ೧೦ನೇ ತರಗತಿಗಳನ್ನೊಳಗೊಂಡ ಸಾಮಾನ್ಯ ಶಿಕ್ಷಣದ ಅಂತ್ಯದವರಿಗೂ ಸಾಗಬೇಕು.

ಎನ್.ಸಿ.ಇ.ಆರ್.ಟಿ., ಎನ್.ಐ.ಇ.ಪಿ.ಎ. ಹಾಗೂ ರಾಜ್ಯಗಳಲ್ಲಿನ ಇತರ ಸಂಬಂಧಿತ ಸಂಸ್ಥೆಗಳನ್ನು ಕಲಿಕಾ ಕನಿಷ್ಠ ಹಂತದ ಅನುಷ್ಠಾನ ಕಾರ್ಯದಲ್ಲಿ ತೊಡಗಿಸಬೇಕು ಜೊತೆಗೆ ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವಾಲಯ ಈ ಕಾರ್ಯಕ್ರಮವನ್ನು ಆರಂಭಿಸುವಲ್ಲಿ, ಮುಂದುವರಿಸುವಲ್ಲಿ ಹಾಗೂ ಸಂಪನ್ಮೂಲ ಸಂಗ್ರಹಣೆ ಮತ್ತು ಫಲಿತಾಂಶವನ್ನು ಪರಾಮರ್ಶಿಸುವಲ್ಲಿ ಪ್ರಮುಖ ಪಾತ್ರ ವಹಿಸಬೇಕು. ಎನ್.ಸಿ.ಇ.ಆರ್.ಟಿ.ಯು. ಕಲಿಕಾ ಕನಿಷ್ಠ ಹಂತದ ವಿವಿಧ ಹಂತಗಳ ಅನುಷ್ಠಾನಕ್ಕಾಗಿ ಶಿಕ್ಷಕರು ಹಾಗೂ ಇತರೆಯವರ ತರಬೇತಿಗಾಗಿ, ಕೈಪಿಡಿಗಳ ರಚನೆಯಾಗಿ ಮತ್ತು ಇತರೆ ಸಾಮಗ್ರಿಗಳ ತಯಾರಿಕೆಗಾಗಿ, ಜೊತೆಗೆ ಮೌಲ್ಯಮಾಪನಾ ಸಾಮಗ್ರಿಗಳ ಒಂದು ಕೂಡುನಿಧಿ ಸ್ಥಾಪಿಸಲು ಹಾಗೂ ಇಂತಹ ಇತರೇ ಉದ್ದೇಶಗಳಿಗಾಗಿ ಒಂದು ವಿಶೇಷ ಘಟಕವನ್ನು ಸ್ಥಾಪಿಸಬೇಕು. ಔಪಚಾರಿಕ ಹಾಗೂ ಅನೌಪಚಾರಿಕ ಶಿಕ್ಷಣದ ಮೂಲಕ ಪ್ರಾಥಮಿಕ ಶಿಕ್ಷಣವನ್ನು ಪಡೆಯುತ್ತಿರುವ ಲಕ್ಷಾಂತರ ಮಕ್ಕಳ ಕಲಿಕೆಯ ಗುಣಮಟ್ಟ ಮತ್ತು ಸಮತ್ವವನ್ನು ಕಾಯ್ದುಕೊಳ್ಳುವುದು ಅಷ್ಟು ಸುಲಭವಲ್ಲ. ಇದರಿಂದಾಗಿ ಕಲಿಕಾ ಕನಿಷ್ಠ ಹಂತಗಳ ಸಂಪನ್ಮೂಲ ಘಟಕಗಳಲ್ಲಿ ಭಾಷೆ, ಗಣಿತ ಮತ್ತು ಸಾಮಾನ್ಯ ಅಭ್ಯಾಸಗಳಂತಹ ವಿಷಯಗಳ ಪರಿಣತರು ಹಾಗೂ ಶಿಕ್ಷಕರು ತರಬೇತಿ, ಕೈಪಿಡಿ ರಚನೆ, ಇತರೆ ಸಾಮಗ್ರಿ ತಯಾರಿಕೆ, ಮೌಲ್ಯಮಾಪನ ಕುರಿತಂತೆ ನುರಿತ ಪರಿಣಿತರು ಇರತಕ್ಕದ್ದು. ಇವರೆಲ್ಲರೂ ದಕ್ಷರು ಮತ್ತು ನಿಪುಣರಾಗಿರುವುದು ಅತ್ಯಂತ ಮುಖ್ಯವಾದುದು.

ಪ್ರಥಮ ಹಂತದ ಅನುಭವಗಳ ಅವಲೋಕನೆಯ ಆಧಾರದ ಮೇಲೆ ಕಲಿಕಾ ಕನಿಷ್ಠ ಹಂತ ಹಾಗೂ ಇತರೆ ಸಂಬಂಧಿಸಿದ ಅಂಶಗಳ ಬಗ್ಗೆ ಅಗತ್ಯ ಬದಲಾವಣೆಗಳನ್ನು ಮಾಡಿದ ನಂತರ ಎರಡನೆಯ ಹಂತವನ್ನು ಆಯ್ದು ಪ್ರದೇಶಗಳಲ್ಲಿನ ಜಿಲ್ಲೆ ಅಥವಾ ಜಿಲ್ಲಾ ವಲಯಗಳಲ್ಲಿ ಆರಂಭಿಸಬಹುದು. ಸಾಕಷ್ಟು ಸಂಪನ್ಮೂಲಗಳು ಲಭ್ಯವಾದಲ್ಲಿ ಮತ್ತು ಮೊದಲನೆ ಹಂತದ ಅನುಭವವು ಉತ್ತೇಜನಕಾರಿಯಾಗಿದ್ದಲ್ಲಿ. ಈ ಕಾರ್ಯಕ್ರಮವನ್ನು ವಿವಿಧ ರಾಜ್ಯಗಳ ೫೦ ಜಿಲ್ಲೆಗಳಲ್ಲಿ ಪ್ರಾರಂಭಿಸಬಹುದು. ಈ ಅಧ್ಯಾಯವು ಹಿಂದಿನ ಪ್ಯಾರಾಗಳಲ್ಲಿ ತಿಳಿಸಲಾದ ಎಲ್ಲಾ ಮುಖ್ಯ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಅಂತಿಮ ಗುರಿಯಾದ ಎಲ್ಲಾ ಮಕ್ಕಳ ಪ್ರಭುತ್ವ ಮಟ್ಟದ ಕಲಿಕೆಯ ಗುಣಮಟ್ಟ

ಸಾಧನೆಯ ಬಗ್ಗೆ ಯಾವುದೇ ರೀತಿಯಲ್ಲಿ ರಾಜಿಯಾಗದಂತೆ ಜಾರಿಗೆ ತರಬೇಕು. ಪುನಃ ಎರಡನೆ ಹಂತದ ಅನುಷ್ಠಾನದ ಅನುಭವಗಳು ಮತ್ತು ಫಲಿತಾಂಶದ ವಿಶ್ಲೇಷಣೆಯ ನಂತರ ಅಗತ್ಯ ಬದಲಾಣೆಯೊಂದಿಗೆ ಮೂರನೇ ಹಂತದಲ್ಲಿ ರಾಷ್ಟ್ರದ ಎಲ್ಲಾ ರಾಜ್ಯಗಳು ಮತ್ತು ಕೇಂದ್ರಾಡಳಿತ ಪ್ರದೇಶಗಳ ಎಲ್ಲಾ ಜಿಲ್ಲೆಗಳಲ್ಲಿ ಈ ಕಲಿಕಾ ಕನಿಷ್ಠ ಹಂತಗಳ ಕಾರ್ಯಕ್ರಮವನ್ನು ಜಾರಿಗೊಳಿಸಬಹುದು. ಪ್ರಾಥಮಿಕ ಶಿಕ್ಷಣದಲ್ಲಿ ಶಿಕ್ಷಣದ ಗುಣಮಟ್ಟ ಏರಿಕೆ ಮತ್ತು ಸಮತ್ವ ಹೆಚ್ಚಿಸಲು ಈ ರೀತಿ ಗಳಿಸಿದ ಅನುಭವವನ್ನು ಬಳಸಿಕೊಂಡು ಸ್ಥಳೀಯ, ರಾಷ್ಟ್ರೀಯ ಹಾಗೂ ಅಂತರಾಷ್ಟ್ರೀಯ ಮಟ್ಟಗಳಲ್ಲಿನ ಅಭಿವೃದ್ಧಿ ಮತ್ತು ಅಗತ್ಯತೆಗಳ ಬೆಳಕಿನಲ್ಲಿ ಮುಂದಿನ ಪರಿಷ್ಕರಣಾ ಸರಣಿಯನ್ನು ಕಾಲಕಾಲಕ್ಕೆ ಕೈಗೊಳ್ಳಬೇಕೆಂಬುದನ್ನು ಒತ್ತಿ ಹೇಳಬೇಕಾಗಿಲ್ಲ.

ಮೂಲ ಶಿಕ್ಷಣದ (Basic Education)ಗುರಿ ಹೊಂದಿರುವ ವಿವಿಧ ನಿರ್ವಹಣಾ ವ್ಯವಸ್ಥೆಗಳ ಅಂತರಿಕ ಮತ್ತು ಮೂಲ ವ್ಯತ್ಯಾಸವನ್ನು ವಯಸ್ಕರ ಶಿಕ್ಷಣದ ಪೂರ್ವ ಮತ್ತು ಪೂರ್ವೋತ್ತರ ಕಾರ್ಯಕ್ರಮದ ಪಠ್ಯವಸ್ತುವಿನಲ್ಲಿರುವ ಸಾಮರ್ಥ್ಯಗಳನ್ನು ಹೋಲಿಕೆಯೊಂದಿಗೆ ವಿಶ್ಲೇಷಿಸಿ ಅರ್ಥಮಾಡಿಕೊಳ್ಳಬೇಕು. ಇಂತಹ ವಿಶ್ಲೇಷಣೆಯ ವಯಸ್ಕರು ಮತ್ತು ಮಕ್ಕಳ ಕಲಿಕಾ ಕನಿಷ್ಠ ಸಾಮರ್ಥ್ಯಗಳನ್ನು ತುಲನಾತ್ಮಕವಾಗಿ ರೂಪಿಸುವಲ್ಲಿ ಸಹಾಯವಾಗಬಲ್ಲದು.

## ೧. ೧೧. ಪ್ರಸ್ತುತ ಅಧ್ಯಯನ

ಮಗು ಹುಟ್ಟಿನಿಂದ ಪರಿಸರವನ್ನು ಬಳಸುತ್ತದೆ. ಪರಿಸರದೊಡನೆ ಪ್ರತಿಕ್ರಿಯಿಸುತ್ತದೆ. ಪರಿಸರದಲ್ಲೇ ಬೆಳೆಯುತ್ತದೆ. ತನ್ನ ಸುತ್ತಲನ್ನು ಕುತೂಹಲದಿಂದ ವೀಕ್ಷಿಸುತ್ತದೆ. ಹೊಸತನ್ನು ಹುಡುಕುತ್ತದೆ. ಶಾಲೆಯನ್ನು ಪ್ರವೇಶಿಸಿದಾಗ ಹಲವು ಅನುಭವಗಳನ್ನು ಪಡೆದುಕೊಂಡಿರುತ್ತದೆ. ಪರಿಸರದಿಂದ ಶಾಲೆಗೆ ಬರುವ ಮಗುವಿಗೆ ಅದರ ಅನುಭವಗಳನ್ನು ಸುತ್ತಲಿನ ಪರಿಸರವನ್ನು ಬಳಸಿಕೊಂಡು ಕಲಿಯುತ್ತದೆ. ಶಿಕ್ಷಣವು ಮಗುವಿನ ಸುಂದರ ವ್ಯಕ್ತಿತ್ವದ ವಿಕಾಸಕ್ಕೆ ಹಾಗೂ ನೈಜ ಜೀವನಕ್ಕೆ ನೆರವಾಗುವ ಕೌಶಲ್ಯ ಮತ್ತು ಮೌಲ್ಯಗಳನ್ನು ಬೆಳೆಸುತ್ತದೆ.

ಮಗುವಿನ ಬಾಲ್ಯಜೀವನ ಮುಗ್ದತೆಯ ಚೌಕಟ್ಟಿನಲ್ಲಿ ಹೆಣೆದಿರುತ್ತದೆ. ಪ್ರತಿಯೊಂದು ಸಂದರ್ಭವನ್ನು ಅನುಸರಿಸುವ ಪ್ರವೃತ್ತಿ ಆ ಮಗುವಿನದು. ಹೀಗಾಗಿ ಶಾಲೆಗೆ ಬರುವ ಮುಂಚೆಯೇ ಮನೆ ಪಾಠಶಾಲೆಯಾಗಿದ್ದು, ಅಲ್ಲಿ ಹಿರಿಯರಿಂದ ಉತ್ತಮ ಸಲಹೆ ಸೂಚನೆಗಳು, ಮಾರ್ಗದರ್ಶನಗಳು, ಶಾಲೆಯ ಪರಿಸರಕ್ಕೆ ಭದ್ರಬುನಾದಿಯಾಗುತ್ತವೆ. ಮಗುವಿನ ನೇರ ನಂಟು ಪರಿಸರದೊಂದಿಗಿದೆ. ಈಗಾಗಲೇ ಮೂರು ಅವಧಿಗಳ ಕಾಲ ಶಾಲೆಯಲ್ಲಿ ಕಲಿತ ಮಗುವಿನ ಪರಿಸರದ ಮೇಲೆ ಅಪಾರವಾದ ಗೌರವವಿದೆ.

ಪ್ರಸ್ತುತ ಪರಿಸರ ಅಧ್ಯಯನ(ವಿಜ್ಞಾನ)ದಲ್ಲಿ ಕಲಿಕಾ ಕನಿಷ್ಠ ಹಂತಗಳ ಅಳವಡಿಕೆಯು ಪ್ರಾಥಮಿಕ ಹಂತ ತರಗತಿಗಳಿಗೆ ಅವಶ್ಯಕವಾಗಿದೆ. ಮಗು ಪ್ರತಿ ಹಂತದಲ್ಲಿ ಬರುವ ಎಲ್ಲಾ ವಿಷಯಗಳ ಮೂಲಕ ಅನೇಕ ಸಾಮರ್ಥ್ಯಗಳನ್ನು ಕಲಿಯುತ್ತದೆ. ಇವು ಪ್ರತಿಹಂತದಲ್ಲಿ ಸರಳತೆಯಿಂದ ಸಂಕೀರ್ಣದೆಡೆಗೆ ವಿಷಯವನ್ನು ಸಾಗಿಸುತ್ತವೆ.

ಕಲಿಕಾ ಕನಿಷ್ಠ ಹಂತಗಳನ್ನು ರಾಷ್ಟ್ರಮಟ್ಟದಲ್ಲಿ ಅನುಷ್ಠಾನಕ್ಕೆ ತಂದನಂತರ ವಿವಿಧ ಶಾಲೆಗಳ ಮಕ್ಕಳಿಗೆ ಅನ್ವಯವಾಗುವಂತೆ ಹಾಗೂ ಅವಶ್ಯಕತೆಗಳಿಗೆ ಉಪಯೋಗವಾಗುವಂತೆ ರೂಪಿಸಲಾಯಿತು. ಅಳವಡಿಸಿದ ಸಾಮರ್ಥ್ಯಗಳ ಸಾಧಿನೆಯು ಶಾಲೆಯಿಂದ ಶಾಲೆಗೆ, ಮಗುವಿನಿಂದ ಮಗುವಿಗೆ ಭಿನ್ನವಾಗಿರುವುವು. ಸಾಧನೆಯ ಸರಿಯಾದ ಮಟ್ಟವನ್ನು ಗೊತ್ತುಮಾಡುವುದು. ಪ್ರಸ್ತುತ ವಿಷಯದ ಅಂಶವಾಗಿದೆ. ಸರಿಯಾದ ಸಾಮರ್ಥ್ಯಗಳ ಸಾಧನೆಯ ಮಹತ್ವವನ್ನು ಗೊತ್ತುಪಡಿಸುವುದರೊಂದಿಗೆ ಶಾಲೆಯ ಬಗೆಗಳಲ್ಲಿರುವ ಲೋಪದೋಷಗಳನ್ನು ಗೊತ್ತುಮಾಡುವುದೂ ಆಗಿದೆ.

ಈ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಪ್ರಸ್ತುತ ಅಧ್ಯಯನವು ಬಳ್ಳಾರಿ ಜಿಲ್ಲೆಯ ಬೇಡ ಸಮುದಾಯದ ಮಕ್ಕಳು ಹಾಗೂ ಶಿಕ್ಷಕರ ಮೇಲೆ ಕಲಿಕಾ ಕನಿಷ್ಠ ಹಂತಗಳ ಸಾಧನೆಯ ಮೌಲ್ಯಮಾಪನ ಮಾಡುವುದಾಗಿದೆ. ಪ್ರಸ್ತುತ ಅಧ್ಯಯನವನ್ನು ಪಿಎಚ್.ಡಿ. ಮಹಾಪ್ರಬಂಧಕ್ಕೆ ಮಂಡಿಸಲು ಸೀಮಿತವಾಗಿದ್ದು, ಕೇವಲ ಒಂದು ವಿಷಯ ಒಂದೇ ತರಗತಿ ಮತ್ತು ಆಯ್ದ ತರಬೇತಿಗಳ ಮೇಲೆ ಆಯ್ದುಕೊಳ್ಳಲಾಗಿದೆ. ಸಂಶೋಧಕ ಪ್ರಸ್ತುತ ವಿಷಯದ ಮೇಲೆ ಪರಿಣಿತಿ ಹೊಂದಿದ್ದು, ಸಾಮರ್ಥ್ಯಗಳನ್ನು ಒಳಗೊಂಡ ತರಬೇತಿಗಳ ಮೇಲೆ ಮೌಲ್ಯಮಾಪನ ಮಾಡುತ್ತಾರೆ.

ಆಯ್ಕೆ ಮಾಡಿಕೊಂಡ ತರಗತಿಯ ಬಗ್ಗೆ ಪ್ರಸ್ತುತಪಡಿಸುವುದಾದರೆ ಈ ಹಿಂದೆ ೨ನೇ ತರಗತಿಯವರೆಗೆ ಕಲಿಕಾ ಕನಿಷ್ಠ ಹಂತಗಳನ್ನು ಕರ್ನಾಟಕ ರಾಜ್ಯದಲ್ಲಿ ಕಾರ್ಯರೂಪಕ್ಕೆ ತರಲಾಗಿದ್ದು, ಇದನ್ನು ೩ ಮತ್ತು ೪ನೇ ತರಗತಿಗಳಿಗೆ ವಿಸ್ತರಿಸಲಾಗಿದೆ. ಆದ ಕಾರಣ ಕಿರಿಯ ಪ್ರಾಥಮಿಕ ಶಾಲೆಯ ಕೊನೆಯ ಹಂತ ನಾಲ್ಕನೇ ತರಗತಿಯನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಇದನ್ನು ಈ ಕೆಳಗಿನ ಅಂಶಗಳು ಪುಷ್ಟೀಕರಿಸುತ್ತವೆ.

೧. ಸಾಮನ್ಯವಾಗಿ ನಾಲ್ಕು ವರ್ಷಗಳ ಶಾಲಾ ಅನುಭವವು ಸ್ವಲ್ಪ ಮಟ್ಟಿನ ಅಕ್ಷರ ಜ್ಞಾನವನ್ನು ಮೂಡಿಸಿರುತ್ತದೆ.

೨. ಈ ಹಂತದಲ್ಲಿ ಶಾಲಾ ಅನುಭವವು ವಿವಿಧ ರೀತಿಯ ಸಮಸ್ಯೆಗಳಿಗಿರುವ ವ್ಯತ್ಯಾಸಗಳನ್ನು ಗ್ರಹಿಸುವ ಸಾಮರ್ಥ್ಯವನ್ನು ಹೊಂದಿರುತ್ತದೆ.

ಆಯ್ದ ಶಿಕ್ಷಕರ ವಿಷಯಕ್ಕೆ ಸಂಬಂಧಿಸಿದಂತೆ ಪ್ರತಿ ತರಬೇತಿಯಲ್ಲಿ ಮೂಲಭೂತವಾಗಿ ಅಳವಡಿಸಿದ ಸಾಮರ್ಥ್ಯಗಳ ಆಧಾರದ ಮೇಲೆ ತಮ್ಮನ್ನು ಮಕ್ಕಳೊಡನೆ ತೊಡಗಿಸಿಕೊಳ್ಳುವಿಕೆ ವಿಷಯದ ಮೇಲೆ ಹಿಡಿತ ವೃತ್ತಿಯ ಶ್ರದ್ಧೆ ಹಾಗೂ ಮೌಲ್ಯಮಾಪನ ಆಧಾರವನ್ನೊಳಗೊಂಡಿದೆ.

ಇದು ಕಲಿಕಾ ಕನಿಷ್ಠ ಹಂತಗಳ ಪಾರದರ್ಶಕ ವರ್ತನೆಯಲ್ಲಿಯ ಸಂಬಂಧ ವ್ಯತ್ಯಾಸಗಳನ್ನು ಗೊತ್ತುಪಡಿಸುವುದಾಗಿದೆ.

## ೧. ೧೨. ಕ್ರಿಯಾತ್ಮಕ ನಿರೂಪಣೆ

ಪ್ರಸ್ತುತ ಸಂಶೋಧನೆಯಲ್ಲಿ ಕಲಿಕಾ ಕನಿಷ್ಠ ಹಂತಗಳನ್ನು ಈ ಕೆಳಗಿನಂತೆ ರೂಪಿಸಲಾಗಿದೆ.

''ನಾಲ್ಕನೇ ತರಗತಿಯಲ್ಲಿ ಓದುತ್ತಿರುವ ಬೇಡ ಸಮುದಾಯದ ಮಕ್ಕಳು ಮತ್ತು ಬೋಧಿಸುವ ಶಿಕ್ಷಕರು ಹೊಂದಿರಬೇಕಾದ ಆಯ್ದ ೧೦ ಸಾಮರ್ಥ್ಯಗಳನ್ನು ಜ್ಞಾನ, ಅರ್ಥೈಸಿಕೊಳ್ಳುವಿಕೆ, ದೈನಂದಿನ ಚಟುವಟಿಕೆಗಳಲ್ಲಿ ಉಪಯೋಗಿಸಿಕೊಳ್ಳುವಿಕೆ, ವೃತ್ತಿ, ದೃಷ್ಟಿಕೋನ, ಅನುಸರಿಸಿಕೊಳ್ಳುವಿಕೆಗಳನ್ನು ಆಧರಿಸಿದ ಪರಿಸರ ಅಧ್ಯಯನ (ವಿಜ್ಞಾನ) ವಿಷಯದ ಸಾಧನೆಯಾಗಿದೆ''.

**ಹತ್ತು ಸಾಮರ್ಥ್ಯಗಳು ಇಂತಿವೆ**

೧. ಸಸ್ಯ ಸಂಪತ್ತಿನ ಉಪಯೋಗ ಮತ್ತು ಅವುಗಳ ಕಾರ್ಯವನ್ನು ಗೊತ್ತು ಪಡಿಸುವುದು.

೨. ಪ್ರಕೃತಿಯ ವಾತಾವರಣಕ್ಕೆ ತಕ್ಕಂತೆ ನೀರಿನ ವಿವಿಧ ಭೌತಿಕ ಸ್ಥಿತಿಯನ್ನು ತಿಳಿಸುವುದು.

೩. ಪ್ರಕೃತಿಯಲ್ಲಿರುವ ವಿವಿಧ ಬಗೆಯ ವಸ್ತುಗಳು ಮತ್ತು ಅವುಗಳ ಭೌತಿಕ ಸ್ಥಿತಿಗಳ ಬಗ್ಗೆ ಜ್ಞಾನವನ್ನು ಮೂಡಿಸುವುದು.

೪. ವಸ್ತುಗಳ ವಿವಿಧ ಬಗೆಯ ರುಚಿಗಳನ್ನು ಗೊತ್ತುಪಡಿಸುವುದು.

೫. ಪ್ರಾಣಿ ಉತ್ಪನ್ನ ಮತ್ತು ಸಸ್ಯ ಉತ್ಪನ್ನಗಳಾಗಿ ವಿಂಗಡಿಸುವುದು.

೬. ನೀರಿನಲ್ಲಿ ಹುದುಗಿರುವ ವಿವಿಧ ಕಶ್ಮಲಗಳನ್ನು ಬೇರ್ಪಡಿಸುವ ವಿಧಾನಗಳ ಬಗ್ಗೆ ಜ್ಞಾನವನ್ನು ಮೂಡಿಸುವುದು.

೭. ತಾಪಮಾನಕ್ಕೆ ತಕ್ಕಂತೆ ವಸ್ತುವಿನ ಸ್ಥಿತಿಗಳಲ್ಲಾಗುವ ಬದಲಾವಣೆಗಳನ್ನು ಗೊತ್ತು ಪಡಿಸುವುದು.

೮. ಸಮತೋಲನ ಆಹಾರ ಹಾಗೂ ಆರೋಗ್ಯದ ಅವಶ್ಯಕತೆಯ ಬಗ್ಗೆ ಅರ್ಥೈಸುವುದು.

೯. ವಿವಿಧ ತರಕಾರಿಗಳ ಅವಶ್ಯಕತೆ ಹಾಗೂ ಅವುಗಳ ಸಂಸ್ಕರಣೆ ಬಗ್ಗೆ ಜ್ಞಾನವನ್ನು ಮೂಡಿಸುವುದು.

೧೦. ನಮ್ಮ ದೇಹದಲ್ಲಿರುವ ವಿವಿಧ ಅಂಗಗಳನ್ನು ಪರಿಚಯಿಸುವುದು ಮತ್ತು ಅವುಗಳ ಕಾರ್ಯದ ಬಗ್ಗೆ ಅರಿವು ಮೂಡಿಸುವುದು.

## ೧. ೧೩. ಪ್ರಸ್ತುತ ಅಧ್ಯಯನದ ಶೀರ್ಷಿಕೆ

ಸಂಶೋಧಕರ ಪ್ರಸ್ತುತ ಅಧ್ಯಯನದ ಶೀರ್ಷಿಕೆ ''ಬಳ್ಳಾರಿ ಜಿಲ್ಲೆ ಬೇಡ ಸಮುದಾಯದ ಶಿಕ್ಷಣದ ಪ್ರಗತಿ : ಒಂದು ಅಧ್ಯಯನ'' (ಜಿಲ್ಲಾ ಪ್ರಾಥಮಿಕ ಶಿಕ್ಷಣ ಯೋಜನೆಯಡಿಯಲ್ಲಿ)

## ೧. ೧೪. ಪ್ರಸ್ತುತ ಅಧ್ಯಯನದಲ್ಲಿ ಉಪಯೋಗಿಸಿದ ಕೆಲವು ಪದಗಳ ವಿವರಣೆ

ಪ್ರಸ್ತುತ ಅಧ್ಯಯನದಲ್ಲಿ ಬಳಸಿದ ಪದಗಳ ವಿವರಣೆ ಈ ಕೆಳಗಿನಂತಿವೆ.

**೧. ಕಲಿಕಾ ಕನಿಷ್ಠ ಹಂತಗಳು (ಮಟ್ಟಗಳು) :** ಯಾವುದೇ ಒಂದು ನಿರ್ದಿಷ್ಟ ವರ್ಗ ಅಥವಾ ಅವಧಿಯಲ್ಲಿ ಮಕ್ಕಳು ಕಲಿಯಲು ಅಳವಡಿಸಿದ ಸಾಮರ್ಥ್ಯಗಳು ಶಿಕ್ಷಣದ ಗುಣಮಟ್ಟವನ್ನು ಸುಧಾರಿಸಲು ಪ್ರಾಥಮಿಕ ಹಂತದ ಎಲ್ಲಾ ವಿಷಯಗಳಲ್ಲಿ ಸಾಮರ್ಥ್ಯಗಳನ್ನು ಅಳವಡಿಸಿ ಅವುಗಳ ಸಾಧನೆಯನ್ನು ಮೌಲ್ಯಮಾಪನದ ಮೂಲಕ ಮಕ್ಕಳ ಕಲಿಕೆಯ ಪ್ರಗತಿಯನ್ನು ನಿರ್ದಿಷ್ಟವಾಗಿ ತಿಳಿಸುತ್ತದೆ.

**೨. ಸಾಮರ್ಥ್ಯ :** ಮಕ್ಕಳು ಗ್ರಹಿಸಿದ ವಿಷಯವನ್ನು ದೈನಂದಿಕವಾಗಿ ಬಳಸಲು ಸಹಾಯಕವಾಗುವುದನ್ನು ಸಾಮರ್ಥ್ಯವೆಂದು ಪರಿಗಣಿಸಬಹುದು. ಇದು ನಿರ್ದಿಷ್ಟವಾದ ಜ್ಞಾನ ಹಾಗೂ ಕ್ರಿಯಾತ್ಮಕ ಅಂಶಗಳನ್ನು ಹೊಂದಿದೆ. ಪೂರ್ವ ನಿರ್ಧರಿಸಿದ ಕಲಿಕೆಯ ಫಲಿತಾಂಶವು ಮೂಲ ಗುರಿ ಹಾಗೂ ಉದ್ದೇಶಗಳನ್ನು ಈಡೇರಿಸುತ್ತದೆ. ಸಾಮರ್ಥ್ಯವು ನಿರಂತರವಾಗಿ ಮಗುವಿನ ಕಲಿಕೆಯ ಎಲ್ಲ ಹಂತಗಳಲ್ಲಿ ಶಿಕ್ಷಣದ ಉದ್ದೇಶವನ್ನು ಹೊಂದಿದೆ.

೩. **ಪೂರ್ವಾಧಾರಿತ ಲಿಖಿತ ಪರೀಕ್ಷೆ** : ಪೂರ್ವಾಧಾರಿತ ಲಿಖಿತ ಪರೀಕ್ಷೆಯು ಮಕ್ಕಳು, ಶಿಕ್ಷಕರು, ಸಮುದಾಯದ ನಡುವಳಿಕೆಯನ್ನು ನೇರವಾಗಿ ಪ್ರತಿಬಿಂಬಿಸುತ್ತದೆ. ಇದು ಅತಿ ನಿಖರವಾದ ಫಲಿತಾಂಶಗಳನ್ನು ನೀಡಲು ಸಹಾಯಕವಾಗಿದೆ. ನಿರ್ದೇಶಿಸಿದ ಉದ್ದೇಶಗಳನ್ನು ಸಮರ್ಪಕವಾಗಿ ಈಡೇರಿಸಲು ಸಹಾಯಕವಾಗಿದೆ.

೪. **ಪಠ್ಯ ಪುಸ್ತಕ** : ಪಠ್ಯಪುಸ್ತಕವು ಸ್ವಾಭಾವಿಕವಾಗಿ ನಿರ್ದಿಷ್ಟ ಉದ್ದೇಶಗಳು, ವಿಷಯ ಕಲಿಕೆಯ ಚಟುವಟಿಕೆಗಳು ಹಾಗೂ ಮೌಲ್ಯಮಾಪನವೆನ್ನುವ ಅಂಶಗಳನ್ನು ಒಳಗೊಂಡಿರುತ್ತದೆ. ಪ್ರಸ್ತುತವಾಗಿ ಪರಿಸರ ಅಧ್ಯಯನ (ವಿಜ್ಞಾನ)ವಿಷಯದ ಸಾಮರ್ಥ್ಯಗಳನ್ನು ಆಯ್ದ ಸಮುದಾಯಕ್ಕೆ ಪ್ರಯೋಗ ಮಾಡಿದಾಗ ಯಾವ ಮಟ್ಟದಲ್ಲಿದೆ ಎಂಬುದನ್ನು ಸಮರ್ಥನೀಯವಾಗಿ ಗೊತ್ತು ಪಡಿಸಬಹುದು.

## ೧. ೧೫. ಸಂಶೋಧನೆಯ ಉದ್ದೇಶಗಳು (Objects of Research)

೧. ೧೯೯೭ರಿಂದ ಈಚೆಗೆ ಜಿಲ್ಲಾ ಪ್ರಾಥಮಿಕ ಯೋಜನೆ ಅಡಿಯಲ್ಲಿ ಬಳ್ಳಾರಿ ಜಿಲ್ಲೆಯ ಬೇಡ ಸಮುದಾಯದ ಶಿಕ್ಷಣದ ಪ್ರಗತಿಯನ್ನು ಅಧ್ಯಯನ ಮಾಡುವುದು.

೨. ಜಿಲ್ಲಾ ಪ್ರಾಥಮಿಕ ಯೋಜನೆ ಅಡಿಯಲ್ಲಿ ತರಬೇತಿ ಪಡೆದ ಬೇಡ ಸಮುದಾಯದ ಶಿಕ್ಷಕರಿಗೆ ಕಲಿಕಾ ಕನಿಷ್ಠ ಹಂತಗಳ ಮೇಲೆ ವಸ್ತುನಿಷ್ಠ ಪರೀಕ್ಷೆಯನ್ನು ಅಭಿವೃದ್ಧಿ ಪಡಿಸುವುದು.

೩. ಜಿಲ್ಲಾ ಪ್ರಾಥಮಿಕ ಯೋಜನೆ ಅಡಿಯಲ್ಲಿ ತರಬೇತಿ ಪಡೆದ ಬಳ್ಳಾರಿ ಜಿಲ್ಲೆಯ ಬೇಡ ಸಮುದಾಯದ ಶಿಕ್ಷಕರ ಅಂಕಿ-ಅಂಶಗಳನ್ನು ಸಂಗ್ರಹಿಸುವುದು.

೪. ಬಳ್ಳಾರಿ ಜಿಲ್ಲೆಯ ನಾಲ್ಕನೇ ತರಗತಿಯಲ್ಲಿ ಓದುತ್ತಿರುವ ಬೇಡ ಸಮುದಾಯದ ಮಕ್ಕಳಿಗೆ ಪರಿಸರ ಅಧ್ಯಯನ (ವಿಜ್ಞಾನ) ವಿಷಯದಲ್ಲಿ ಕಲಿಕಾ ಕನಿಷ್ಠ ಹಂತಗಳ ಆಧಾರದ ಮೇಲೆ ಲಿಖಿತ ಪರೀಕ್ಷೆಯನ್ನು ಅಭಿವೃದ್ಧಿಪಡಿಸುವುದು.

೫. ಬಳ್ಳಾರಿ ಜಿಲ್ಲೆಯ ನಾಲ್ಕನೇ ತರಗತಿಯಲ್ಲಿ ಓದುತ್ತಿರುವ ಬೇಡ ಸಮುದಾಯದ ಮಕ್ಕಳಿಗೆ ಪರಿಸರ ಅಧ್ಯಯನ (ವಿಜ್ಞಾನ) ವಿಷಯದಲ್ಲಿ ಕಲಿಕಾ ಕನಿಷ್ಠ ಹಂತಗಳ ಮೇಲೆ ವಾಸಸ್ಥಳ, ಸಂಸ್ಥೆ ಹಾಗೂ ಲಿಂಗಗಳಿಗೆ ಅನುಗುಣವಾಗಿ ಅವಲೋಕಿಸುವುದು.

೬. ಬಳ್ಳಾರಿ ಜಿಲ್ಲೆಯ ನಾಲ್ಕನೇ ತರಗತಿಯಲ್ಲಿ ಓದುತ್ತಿರುವ ಬೇಡ ಸಮುದಾಯ ಮಕ್ಕಳಿಗೆ ಪರಿಸರ ಅಧ್ಯಯನ (ವಿಜ್ಞಾನ) ವಿಷಯದಲ್ಲಿ ಕಲಿಕಾ ಕನಿಷ್ಠ ಹಂತಗಳ ಮೇಲಿನ ಆಯ್ದ ಸಾಮರ್ಥ್ಯಗಳನ್ನು ಹೋಲಿಸುವುದು.

**೧. ಪ್ರಸ್ತುತ ಅಧ್ಯಯನದ ಪೂರ್ವ ಸಿದ್ಧಾಂತ :** ಕಲಿಕಾ ಕನಿಷ್ಠ ಹಂತಗಳಲ್ಲಿಯ ಸಾಮರ್ಥ್ಯಗಳನ್ನು ಮಕ್ಕಳು ನಿರ್ದಿಷ್ಟ ಅವಧಿಯಲ್ಲಿ ಪರಿಣಾಮಕಾರಿಯಾಗಿ ಈಡೇರಿಸಿದರೆ, ಶಿಕ್ಷಕರು ತಾವು ಪಡೆದ ತರಬೇತಿಯ ಆಧಾರದ ಮೇಲೆ ಮಕ್ಕಳೆಡೆಗೆ ಅವರ ದೃಷ್ಟಿಕೋನ, ವೃತ್ತಿಯ ಪ್ರಾವಿಣ್ಯತೆ, ಹೊಂದಾಣಿಕೆ, ಸಮುದಾಯದ ಪಾಲ್ಗೊಳ್ಳುವಿಕೆಯ ಮೇಲೆ ಸಂಶೋಧಕ ಯಾವುದೆ ನಿರ್ದಿಷ್ಟವಾದ ಗೊತ್ತುವಳಿ ಕಷ್ಟಕರವಾದ ಕಾರಣ ಈಡೇರಿಸಬಹುದಾದ ಕೆಲವು ಅಯ್ದ ಸಾಮರ್ಥ್ಯಗಳನ್ನು ಅಳವಡಿಸಿ ಪ್ರಯೋಗಿಸಲಾಗುತ್ತದೆ. ಆದ್ದರಿಂದ ಪ್ರಸ್ತುತ ಅಧ್ಯಯನದ ಪೂರ್ವ ಸಿದ್ಧಾಂತಗಳನ್ನು ನಿರ್ದೇಶಿಸಿದ ರೀತಿಯಲ್ಲಿ ಸಾಮರ್ಥ್ಯಗಳ ಸಾಧನೆಯ ಭಾಗವಾಗಿ ರೂಪಿಸಲಾಗಿದೆ.

೧. ನಗರ ಮತ್ತು ಗ್ರಾಮೀಣ ಪ್ರದೇಶದಲ್ಲಿ ಓದುತ್ತಿರುವ ಬೇಡ ಸಮುದಾಯದ ಮಕ್ಕಳು ಪರಿಸರ ಅಧ್ಯಯನ (ವಿಜ್ಞಾನ) ವಿಷಯದಲ್ಲಿ ಅಳವಡಿಸಿದ ಪ್ರತಿಯೊಂದು ಹಾಗೂ ಎಲ್ಲಾ ಸಾಮರ್ಥ್ಯಗಳನ್ನು ಸಮರ್ಪಕವಾಗಿ ಸಾಧಿಸುತ್ತಾರೆ.

೨. ಸರಕಾರಿ ಮತ್ತು ಖಾಸಗಿ ಶಾಲೆಗಳಲ್ಲಿ ಓದುತ್ತಿರುವ ಬೇಡ ಸಮುದಾಯದ ಮಕ್ಕಳು ಪರಿಸರ ಅಧ್ಯಯನ (ವಿಜ್ಞಾನ) ವಿಷಯದ ಮೇಲಿನ ಪ್ರತಿಯೊಂದು ಹಾಗೂ ಎಲ್ಲಾ ಸಾಮರ್ಥ್ಯಗಳಲ್ಲಿ ಗಣನೀಯ ಭಾಗವು ತೃಪ್ತಿಕರ ಸಾಧನೆಗೈಯುವರು.

೩. ಪರಿಸರ ಅಧ್ಯಯನ (ವಿಜ್ಞಾನ) ವಿಷಯವನ್ನು ಓದುತ್ತಿರುವ ಬೇಡ ಸಮುದಾಯದ ಗಂಡು ಮತ್ತು ಹೆಣ್ಣು ಮಕ್ಕಳು ಅಳವಡಿಸಿದ ಪ್ರತಿಯೊಂದು ಹಾಗೂ ಎಲ್ಲಾ ಸಾಮರ್ಥ್ಯಗಳನ್ನು ತೃಪ್ತಿಕರವಾಗಿ ಸಾಧಿಸಬಲ್ಲರು.

೪. ಜಿಲ್ಲಾ ಪ್ರಾಥಮಿಕ ಶಿಕ್ಷಣ ಯೋಜನೆಯ ಅಡಿಯಲ್ಲಿ ತರಬೇತಿ ಪಡೆದ ಶಿಕ್ಷಕರು ಕನಿಷ್ಠ ಕಲಿಕಾ ಹಂತಗಳ ಸಾಮರ್ಥ್ಯಗಳನ್ನು ಮಕ್ಕಳಿಗೆ ಅಳವಡಿಸುವುದು ನಗರ ಹಾಗೂ ಗ್ರಾಮೀಣ ಪ್ರದೇಶಗಳಿಗೆ ತೃಪ್ತಿಕರವಾಗಿದೆ.

೫. ಜಿಲ್ಲಾ ಪ್ರಾಥಮಿಕ ಯೋಜನೆಯ ಅಡಿಯಲ್ಲಿ ತರಬೇತಿ ಪಡೆದ ಎಲ್ಲಾ ಶಿಕ್ಷಕ, ಶಿಕ್ಷಕಿಯರು ಅನುಮೋದಿಸಿದ ಸಾಮರ್ಥ್ಯಗಳನ್ನು ಮಕ್ಕಳಿಗೆ ತಿಳಿಯಪಡಿಸುವುದರಲ್ಲಿ ಗಣನೀಯ ಸಾಧನೆ ಹೊಂದಿರುತ್ತಾರೆ.

೬. ಸರಕಾರಿ ಮತ್ತು ಖಾಸಗಿ ಶಾಲೆಗಳಲ್ಲಿ ಬೋಧಿಸುವ ಶಿಕ್ಷಕರು ಪರಿಸರ ಅಧ್ಯಯನ (ವಿಜ್ಞಾನ) ವಿಷಯದಲ್ಲಿ ಅಳವಡಿಸಿದ ಪ್ರತಿ ಹಾಗೂ ಎಲ್ಲಾ ಸಾಮರ್ಥ್ಯಗಳನ್ನು ಗಣನೀಯವಾಗಿ ಸಾಧಿಸಬಲ್ಲರು.

೭. ನಗರ ಮತ್ತು ಗ್ರಾಮೀಣ ಶಾಲೆಗಳಲ್ಲಿ ಬೇಡ ಸಮುದಾಯದ ಮಕ್ಕಳು ಪ್ರತಿ ಹಾಗೂ ಎಲ್ಲಾ ಸಾಮರ್ಥ್ಯಗಳ ಸಾಧನೆಯಲ್ಲಿ ಗಣನೀಯ ವ್ಯತ್ಯಾಸವಿರುತ್ತದೆ.

೮. ಸರಕಾರಿ ಮತ್ತು ಖಾಸಗಿ ಶಾಲೆಗಳಲ್ಲಿ ಓದುತ್ತಿರುವ ಬೇಡ ಸಮುದಾಯದ ಮಕ್ಕಳು ಪರಿಸರ ಅಧ್ಯಯನ (ವಿಜ್ಞಾನ) ವಿಷಯದಲ್ಲಿ ಅಳವಡಿಸಿದ ಪ್ರತಿ ಹಾಗೂ ಎಲ್ಲಾ ಸಾಮರ್ಥ್ಯಗಳ ಸಾಧನೆಯಲ್ಲಿ ವ್ಯತ್ಯಾಸವಿರುತ್ತದೆ.

೯. ನಾಲ್ಕನೇ ತರಗತಿಯಲ್ಲಿ ಓದುತ್ತಿರುವ ಬೇಡ ಸಮುದಾಯದ ಬಾಲಕ, ಬಾಲಕಿಯರು ಪರಿಸರ ಅಧ್ಯಯನ (ವಿಜ್ಞಾನ) ವಿಷಯದಲ್ಲಿ ಅಳವಡಿಸಿದ ಪ್ರತಿ ಹಾಗೂ ಎಲ್ಲಾ ಸಾಮರ್ಥ್ಯಗಳ ಸಾಧನೆಯಲ್ಲಿ ವ್ಯತ್ಯಾಸವಿರುತ್ತದೆ.

೧೦. ಸರಕಾರಿ ಮತ್ತು ಖಾಸಗಿ ಶಾಲೆಗಳಲ್ಲಿ ಪರಿಸರ ಅಧ್ಯಯನ (ವಿಜ್ಞಾನ) ವಿಷಯವನ್ನು ಬೋಧಿಸುವ ಶಿಕ್ಷಕರು ಪ್ರತಿಯೊಂದು ಹಾಗೂ ಎಲ್ಲಾ ಸಾಮರ್ಥ್ಯಗಳ ಸಾಧನೆಯಲ್ಲಿ ನಿರ್ದಿಷ್ಟವಾದ ವ್ಯತ್ಯಾಸವಿದೆ.

## ೧. ೧೬. ಪ್ರಸ್ತುತ ಅಧ್ಯಯನದ ರೂಪುರೇಷೆಗಳು

**೧. ಅಧ್ಯಯನದ ವ್ಯಾಪ್ತಿ :** ಸಂಶೋಧಕರು ಪ್ರಸ್ತುತ ಅಧ್ಯಯನಕ್ಕೆ ಬಳ್ಳಾರಿ ಜಿಲ್ಲೆಯನ್ನು ಆಯ್ದುಕೊಂಡಿದ್ದಾರೆ. ಈ ಜಿಲ್ಲೆಯಲ್ಲಿ ೮ ತಾಲೂಕುಗಳಿವೆ. ಅವು ಹಡಗಲಿ, ಹಗರಿಬೊಮ್ಮನಹಳ್ಳಿ, ಹೊಸಪೇಟೆ, ಬಳ್ಳಾರಿ, ಹರಪನಹಳ್ಳಿ, ಕೂಡ್ಲಿಗಿ, ಸಂಡೂರು ಹಾಗೂ ಸಿರಿಗುಪ್ಪ. (ಭೌಗೋಳಿಕ ಭೂಪಟವನ್ನು ಪುಟ ೭೭ರಲ್ಲಿ ಪ್ರಸ್ತುತಪಡಿಸಲಾಗಿದೆ).

* ಪ್ರಸ್ತುತ ಹರಪನಹಳ್ಳಿ ತಾಲೂಕು ದಾವಣಗೆರೆ ಜಿಲ್ಲೆಗೆ ಸೇರಿದ್ದರೂ ಸಹ ಜಿಲ್ಲಾ ಪ್ರಾಥಮಿಕ ಯೋಜನೆಯ ಅಡಿಯಲ್ಲಿ ಬಳ್ಳಾರಿ ಜಿಲ್ಲೆಯು ಈ ತಾಲೂಕನ್ನು ದತ್ತು ತಾಲೂಕನ್ನಾಗಿ ಸ್ವೀಕರಿಸಿರುತ್ತದೆ.

* ಸಂಶೋಧನೆಯ ವಿಶಾಲತೆಗಾಗಿ ಅಲ್ಲಲ್ಲಿ ಆಂಗ್ಲಭಾಷೆಯ ಪದಗಳನ್ನು ಬಳಸಲಾಗಿದೆ.

**೨. ಸಂಶೋಧನೆಗೆ ಉಪಯೋಗಿಸಿದ ಚರಾಂಕಗಳು (Variables) :** ಪ್ರಸ್ತುತ ಅಧ್ಯಯನದಲ್ಲಿ ಉಪಯೋಗಿಸಲಾದ ಅವಲಂಬಿತ ಚರಾಂಕಗಳು ಕಲಿಕಾ ಕನಿಷ್ಠ ಹಂತಗಳಲ್ಲಿ ನಮೂದಿಸಲಾದ ಸಾಮರ್ಥ್ಯಗಳ ಸಾಧನೆಯಾದರೆ ಲಿಂಗ, ಗ್ರಾಮೀಣ, ನಗರ, ಸಂಸ್ಥೆಗಳು ಸ್ವತಂತ್ರ ಚರಾಂಕಗಳೆಂದು ಪರಿಗಣಿಸಲಾಗಿದೆ.

**೩. ಸಂಶೋಧನೆಗೆ ಆಯ್ದ ಭಾಗ :** ಪ್ರಸ್ತುತ ಅಧ್ಯಯನದಲ್ಲಿ ಆಯ್ಕೆ ವಿಧಾನವನ್ನು ಬಳ್ಳಾರಿ ಜಿಲ್ಲೆಯ ಎಲ್ಲಾ ತಾಲೂಕುಗಳಿಂದ ೪೦೦೦ ವಿದ್ಯಾರ್ಥಿಗಳನ್ನು, ೨೦೦ ಶಿಕ್ಷಕರನ್ನು ಹಾಗೂ ೨೦೦ ಸಮುದಾಯದ ಸದಸ್ಯರನ್ನು ವ್ಯವಸ್ಥಿತ ಉಪಗುಂಪುಗಳಾಗಿ ವಿಂಗಡಿಸುವ ತಂತ್ರದಿಂದ ಯಾರನ್ನೂ ಅಲಕ್ಷಿಸದೆ ಆಯ್ಕೆ ಮಾಡಲಾಗಿದೆ. ಇದರ ವಿಂಗಡನೆಯನ್ನು ಅಧ್ಯಾಯ-೩ರಲ್ಲಿ ಕಾಣಬಹುದಾಗಿದೆ.



**೪. ಸಂಶೋಧನೆಗೆ ಉಪಯೋಗಿಸಿದ ಸಾಮಗ್ರಿ :** ಸಂಶೋಧಕರು ಪರಿಸರ ಅಧ್ಯಯನ (ವಿಜ್ಞಾನ) ವಿಷಯದ ಮೇಲೆ ಸಾಧನೆಯ ಲಿಖಿತ ಪರೀಕ್ಷೆಯನ್ನು ಬಳ್ಳಾರಿ ಜಿಲ್ಲೆಯ ನಾಲ್ಕನೇ ತರಗತಿಯಲ್ಲಿ ಓದುತ್ತಿರುವ ೪೦೦೦ ಬೇಡ ಸಮುದಾಯದ ಮಕ್ಕಳ ಮೇಲೆ ಪ್ರಯೋಗಿಸಿ, ೨೦೦ ಶಿಕ್ಷಕರಿಂದ ವಸ್ತು ನಿಷ್ಟ ಪ್ರಶ್ನಾವಳಿಯ ಮೂಲಕ ಮಾಹಿತಿ ಸಂಗ್ರಹಿಸುವುದಲ್ಲದೆ ೨೦೦ ನೂರು ಸಮಾಜದ ವಿವಿಧ ಸ್ತರಗಳ ಗಣ್ಯರಿಂದ ಅಭಿಪ್ರಾಯಗಳನ್ನು ಪಡೆಯಲು ಸಿದ್ಧ ಪಡಿಸಿದ ಪ್ರಶ್ನಾವಳಿಯನ್ನು ರಚಿಸಲಾಗಿದೆ. ಇವುಗಳ ಮಾದರಿ ಹಾಗೂ ಉತ್ತರ ಪತ್ರಿಕೆಗಳನ್ನು ಈ ಗ್ರಂಥದ ಕೊನೆಯ ಪುಟಗಳಲ್ಲಿ ಪ್ರಸ್ತುತಪಡಿಸಲಾಗಿದೆ.

**೫. ಮಾಹಿತಿ ಸಂಗ್ರಹಣಾ ವಿಧಾನ :** ಸಂಶೋಧಕರು ವಿಶ್ವವಿದ್ಯಾಲಯದಿಂದ ಕ್ಷೇತ್ರ ಪರಿವೀಕ್ಷಣೆಗೆ ಅನುಮತಿ ಪಡೆದ ನಂತರ, ಜಿಲ್ಲಾ ಶಿಕ್ಷಣ ಇಲಾಖೆಯಿಂದ ಜಿಲ್ಲೆಯ ಎಲ್ಲಾ ಶಾಲೆಗಳನ್ನು ಭೇಟಿ ನೀಡಲು ಅನುಮತಿ ಪಡೆಯ ಲಾಯಿತು. ತರುವಾಯ ನಾಲ್ಕನೇ ತರಗತಿಯಲ್ಲಿ ಓದುತ್ತಿರುವ ಬೇಡ ಸಮುದಾಯದ ಮಕ್ಕಳು, ವಿವಿಧ ತರಬೇತಿ ಪಡೆದ ಶಿಕ್ಷಕರು ಹಾಗೂ ವಿವಿಧ ಸ್ಥರದ ಗ್ರಾಮಸ್ಥರಿಂದ ಮಾಹಿತಿ ಸಂಗ್ರಹಣಾ ಕಾರ್ಯವನ್ನು ನವೆಂಬರ್ ೨೦೦೨ರಿಂದ ಆರಂಭಗೊಂಡು ಜನವರಿ ೨೦೦೩ಕ್ಕೆ ಪೂರ್ಣಗೊಂಡಿತು. ಸರಿಯಾದ ಉತ್ತರಗಳಿಗೆ ಅಂಕಗಳನ್ನು ಹಾಗೂ ವರ್ಗಗಳನ್ನು ಪ್ರತ್ಯೇಕವಾಗಿ ಪಟ್ಟಿ ಮಾಡಲಾಗುವುದು.



## ೧. ೧೭. ವಿಶ್ಲೇಷಣಾ ತಂತ್ರವಿಧಾನ

ಪ್ರಸ್ತುತ ಅಧ್ಯಯನದಲ್ಲಿ ದ್ವಿಮಾನ ಪರೀಕ್ಷೆಯನ್ನು ಉಪಯೋಗಿಸಲಾಗಿದ್ದು, ಪರಿಸರದ ಅಧ್ಯಯನದ (ವಿಜ್ಞಾನ) ವಿಷಯದ ಮೇಲೆ ನಾಲ್ಕನೇ ತರಗತಿಯಲ್ಲಿ ಓದುತ್ತಿರುವ ಬೇಡ ಸಮುದಾಯ ಮಕ್ಕಳ ಪ್ರತಿ ಹಾಗೂ ಎಲ್ಲಾ

# ಭೂಪಟ

## ಜಿಲ್ಲಾ ಪ್ರಾಥಮಿಕ ಶಿಕ್ಷಣ ಯೋಜನೆಯ ವ್ಯಾಪ್ತಿಯಲ್ಲಿ ಬಳ್ಳಾರಿ ಜಿಲ್ಲೆ



ಸಾಮರ್ಥ್ಯಗಳ ಭಾಗವನ್ನು ಕಂಡುಹಿಡಿಯುವುದು. ತರಬೇತಿಯ ಆಧಾರದ ಮೇಲೆ ಶಿಕ್ಷಕರ ಅಭಿಪ್ರಾಯವನ್ನು ವಿವಿಧ ಗುಂಪುಗಳಿಂದ ಪರೀಕ್ಷಿಸುವುದು.

ಜಿ. ಪರೀಕ್ಷೆಯನ್ನು (Z-Test) ಮಕ್ಕಳು ಹಾಗೂ ಶಿಕ್ಷಕರ ಸಾಮರ್ಥ್ಯಗಳ ಸಾಧನೆಯ ಭಾಗದಲ್ಲಿರುವ ಪ್ರತಿ ಹಾಗೂ ಎಲ್ಲಾ ಸಾಮರ್ಥ್ಯಗಳ ಆಧಾರದ ಮೇಲೆ ವ್ಯತ್ಯಾಸಗಳನ್ನು ಕಂಡುಹಿಡಿಯಲು ಉಪಯೋಗಿಸಲಾಗಿದೆ.

ಪರಿಸರ ಅಧ್ಯಯನ (ವಿಜ್ಞಾನ) ವಿಷಯದ ಮೇಲೆ ನಾಲ್ಕನೆಯ ತರಗತಿಯ ಮಕ್ಕಳಿಗೆ ಲಿಖಿತ ಪರೀಕ್ಷೆಯನ್ನು ನೀಲಿ ನಕ್ಷೆ ೧ರಲ್ಲಿ ನಮೂದಿಸಿರುವಂತೆ ಪ್ರಶ್ನೆಗಳನ್ನು ಆಯ್ದುಕೊಳ್ಳಲಾಗಿದೆ. ಪ್ರಾಥಮಿಕ ಹಂತದ ಬೋಧಕ ವರ್ಗಕ್ಕೆ ನೀಲಿ ನಕ್ಷೆ ೨ರಲ್ಲಿ ನಮೂದಿಸಿರುವಂತೆ ವಸ್ತುನಿಷ್ಠ ಪರೀಕ್ಷೆಯನ್ನು ಸಿದ್ಧಪಡಿಸಲಾಗಿದೆ.

## ೧. ೧೮. ನೀಲಿ ನಕ್ಷೆ ೧ ಮತ್ತು ೨

### ನೀಲಿ ನಕ್ಷೆ ೧ (Blue Print)

### ನಾಲ್ಕನೇ ತರಗತಿಯ ಪರಿಸರ ಅಧ್ಯಯನ (ವಿಜ್ಞಾನ) ವಿಷಯದ ಲಿಖಿತ ಪರೀಕ್ಷೆ

| ಪ್ರಶ್ನೆಗಳು | | | | | | | | | |
|---|---|---|---|---|---|---|---|---|---|
| | I | II | III | IV | V | VI | VII | VIII | ಒಟ್ಟು |
| ಜ್ಞಾನ (Knowledge) | ೧, ೨, ೭, ೮, ೯ | ೧ | ೪ ೧, ೩ | ೨, ೨, ೨, ೨, ೨, | ೩, ೪ | ೧, ೪ ೫ | ೧, ೪, | ೨, ೩, ೧, ೪ | ೨೫ |
| ಅರ್ಥೈಸಿಕೊಳ್ಳುವುದು (Understand) | ೩, ೫ | ೪ | ೨, ೫ | ೧, ೧ | ೧, ೨, ೩ | ೨, ೩ | ೩ | ೨, ೩ | ೧೫ |
| ಕೌಶಲ್ಯಗಳು (Skills) | ೬ | ೩ | - | - | ೧ | - | ೫ | ೧ | ೦೫ |
| ಅಳವಡಿಸಿಕೊಳ್ಳುವಿಕೆ (Application) | ೪ | ೨ | - | - | ೨ | - | ೨ | ೪ | ೦೫ |
| ಒಟ್ಟು | ೦೯ | ೦೪ | ೦೫ | ೦೭ | ೦೭ | ೦೫ | ೦೫ | ೦೮ | ೫೦ |

ಶೇಕಡಾವಾರು
೧. ಜ್ಞಾನ ೫೦%
೨. ಅರ್ಥೈಸಿಕೊಳ್ಳುವುದು ೩೦%
೩. ಕೌಶಲ್ಯಗಳು ೧೦%
೪. ಅಳವಡಿಸಿಕೊಳ್ಳುವಿಕೆ ೧೦%

ನಾಲ್ಕನೆಯ ತರಗತಿಯು ಕಿರಿಯ ಪ್ರಾಥಮಿಕ ಹಂತದ ಕೊನೆಯ ತರಗತಿಯಾಗಿದ್ದು, ಪರಿಸರ ಅಧ್ಯಯನ (ವಿಜ್ಞಾನ) ವಿಷಯವು ಜ್ಞಾನ ಮತ್ತು ಅರ್ಥೈಸುವಿಕೆಗೆ ಹೆಚ್ಚಿನ ಮಹತ್ವವನ್ನು ಕೊಟ್ಟಿದೆ

## ನೀಲಿ ನಕ್ಷೆ ೨ (Blue Print)

### ಕಿರಿಯ ಪ್ರಾಥಮಿಕ ಭೋದಕ ವರ್ಗಕ್ಕೆ ವಸ್ತುನಿಷ್ಠ ಪರೀಕ್ಷೆ

| | ಪ್ರಶ್ನೆಗಳು | ಒಟ್ಟು |
|---|---|---|
| ವೃತ್ತಿಗೆ ಹೊಂದಿಕೊಳ್ಳುವಿಕೆ (Ability of Adaptibility) | ೩, ೬, ೧೦, ೧೮, ೨೦ | ೦೫ |
| ವೃತ್ತಿಯ ಬಗ್ಗೆ ಮಾಹಿತಿ (Professional Information) | ೧, ೨, ೯, ೧೩, ೧೫ | ೦೫ |
| ವೃತ್ತಿಯೆಡೆಗಿನ ಆಸಕ್ತಿ (Interest in profession) | ೪, ೭, ೧೧, ೧೪, ೧೭ | ೦೫ |
| ಮಕ್ಕಳೆಡೆಗಿನ ದೃಷ್ಟಿಕೋನ (Attitude Towards Students) | ೫, ೮, ೧೨, ೧೬, ೧೯ | ೦೫ |
| ಒಟ್ಟು | | ೨೦ |

ಸಂಶೋಧಕರು ಮೇಲಿನ ನಾಲ್ಕು ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಸಮಾನ ಪ್ರಶ್ನೆಗಳಿಂದ ಪ್ರಶ್ನಾವಳಿಯನ್ನು ರೂಪಿಸಲಾಗಿದೆ.

### ೧. ೧೯. ಸಂಶೋಧನೆಯ ಇತಿಮಿತಿಗಳು

ಸಂಶೋಧಕರು ಪ್ರಸ್ತುತವಾಗಿ ಪರಿಸರ ಅಧ್ಯಯನದ (ವಿಜ್ಞಾನ) ವಿಷಯದ ಮೇಲೆ ಮಕ್ಕಳಿಗೆ ಲಿಖಿತ ಪರೀಕ್ಷೆ, ಶಿಕ್ಷಕರಿಗೆ ವಸ್ತುನಿಷ್ಠ ಪರೀಕ್ಷೆ ಹಾಗೂ ಸಮುದಾಯವನ್ನು ಈ ಕೆಳಗಿನಂತೆ ಸೀಮಿತಗೊಳಿಸಲಾಗಿದೆ.

೧. ಪ್ರಸ್ತುತ ಅಧ್ಯಯನದ ವ್ಯಾಪ್ತಿ ಬಳ್ಳಾರಿ ಜಿಲ್ಲೆಗೆ ಸೀಮಿತವಾಗಿದೆ.

೨. ಪ್ರಸ್ತುತ ಅಧ್ಯಯನವು ೪೦೦೦ ಮಕ್ಕಳು, ೨೦೦ ಶಿಕ್ಷಕರು, ೨೦೦ ಸಮುದಾಯ ಗಣ್ಯರುಗಳಿಗೆ ಸೀಮಿತಗೊಳಿಸಲಾಗಿದೆ.

೩. ಪ್ರಸ್ತುತ ಅಧ್ಯಯನವು ಪರಿಸರ ಅಧ್ಯಯನ (ವಿಜ್ಞಾನ) ತರಗತಿ-IIರಿಂದ ತರಗತಿ-IVರವರೆಗೆ ಒಟ್ಟು ೨೦ ಸಾಮರ್ಥ್ಯಗಳಿದ್ದರೂ ಕೇವಲ ೧೦ ಸಾಮರ್ಥ್ಯಗಳನ್ನು ಉಪಯೋಗಿಸಿಕೊಳ್ಳಲಾಗಿದೆ.

೪. ಪ್ರಸ್ತುತ ಅಧ್ಯಯನದಲ್ಲಿ ಸ್ವತಂತ್ರ ಅಂಶಗಳಾದ ಲಿಂಗ, ಪ್ರದೇಶ, ಶಾಲೆಯ ಬಗೆಗೆ ಸೀಮಿತಗೊಳಿಸಲಾಗಿದೆ.

### ೧. ೨೦. ಸಂಶೋಧನೆಯ ಪಕ್ಷಿನೋಟ

ಪ್ರಸ್ತುತ ಅಧ್ಯಯನವು ಒಟ್ಟಾರೆಯಾಗಿ ೫ ಅಧ್ಯಾಯಗಳನ್ನು ಒಳಗೊಂಡಿದ್ದು, ಮೊದಲನೇ ಅಧ್ಯಾಯವು ಪ್ರಸ್ತಾವನೆ ಅಧ್ಯಯನದ ಅವಶ್ಯಕತೆ ಹಾಗೂ ಪ್ರಾಮುಖ್ಯತೆ, ಉದ್ದೇಶಗಳು, ಪೂರ್ವಸಿದ್ಧಾಂತ, ಅಧ್ಯಯನದ ರೂಪುರೇಷ, ಉಪಯೋಗಿಸಿದ ಸಾಮಗ್ರಿ ವಿಶ್ಲೇಷಣೆ, ತಂತ್ರವಿಧಾನದೊಂದಿಗೆ ಅಧ್ಯಯನದ ಇತಿಮಿತಿಗಳನ್ನೊಳಗೊಂಡಿದೆ.

ಸಂಶೋಧನೆಗೆ ಪೂರಕವಾದ ಗ್ರಂಥಗಳ ಪರಾಮರ್ಶನೆಯನ್ನು ಅಧ್ಯಾಯ ಎರಡರಲ್ಲಿ ಸಾದರಪಡಿಸಲಾಗಿದೆ. ಮಾಹಿತಿ ಸಂಗ್ರಹಣೆಗಾಗಿ ಬಳಸಿದ ಸಾಮಗ್ರಿಗಳ ವಿವರಣಾತ್ಮಕ ತುಲನೆಯನ್ನು ಅಧ್ಯಾಯ-III ಪ್ರಸ್ತುತಪಡಿಸಲಾಗಿದೆ.

ಮಾಹಿತಿ ಸಂಗ್ರಹಣದ ವಿಶ್ಲೇಷಣೆ ತಂತ್ರವಿಧಾನ ಹಾಗೂ ಅಂಕಿ ಅಂಶಗಳ ಚಿತ್ರಣವನ್ನು ಅಧ್ಯಾಯ-IVರಲ್ಲಿ ಪ್ರಸ್ತುತಪಡಿಸಲಾಗಿದೆ.

ಅಧ್ಯಯನದ ಫಲಿತಾಂಶ ಹಾಗೂ ಮುಂದಿನ ಅಧ್ಯಯನಕ್ಕೆ ಮಾರ್ಗಸೂಚಿಗಳನ್ನು ಅಧ್ಯಾಯ-Vರಲ್ಲಿ ಪ್ರಸ್ತುತಪಡಿಸಲಾಗಿದೆ.

ಪರಾಮರ್ಶಿಸಿದ ಗ್ರಂಥಗಳ ಪಟ್ಟಿ ಹಾಗೂ ಅಧ್ಯಯನಕ್ಕೆ ಬಳಸಿದ ಸಾಮಗ್ರಿಗಳ ಪ್ರತಿಗಳನ್ನು ಈ ಗ್ರಂಥದ ಕೊನೆಯ ಪುಟಗಳಲ್ಲಿ ಪ್ರಸ್ತುತಪಡಿಸಲಾಗಿದೆ.

## ಆಧಾರ ಗ್ರಂಥಗಳು


೧. ಓಬಳೇಶ್ ಘಟ್ಟಿ, ಉದಯೋನ್ಮುಖ ಭಾರತದಲ್ಲಿ ಶಿಕ್ಷಣ, ವಿದ್ಯಾನಿಧಿ ಪ್ರಕಾಶನ, ಗದಗ, ೨೦೦೧, ಪುಟ ೫.

೨. David L. Stills, International Encyclopedia of the Social Science Vol -3, The Macmillan Company & the free press, New Delhi, 1992. P. 509-510

೩, Joycem Hawkins, The Oxford Paperback Dictionary Third Edition, Oxford University press, 1990. P. 256.

೪. ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ೧೯೯೧, ಪುಟ ೩೬೩.

೫. ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ೧೯೯೧, ಪುಟ ೩೬೩.

೬. ಓಬಳೇಶ್ ಘಟ್ಟಿ, ಉದಯೋನ್ಮುಖ ಭಾರತದಲ್ಲಿ ಶಿಕ್ಷಣ, ೨೦೦೧, ಪುಟ ೩೩೮.

೭. ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ೧೯೯೧, ಪುಟ ೩೬೩.

೮. ಜಿಲ್ಲಾ ಪ್ರಾಥಮಿಕ ಶಿಕ್ಷಣ ಯೋಜನೆ ಕಾರ್ಯಕ್ರಮ, ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಸಂಸ್ಥೆ ಬೆಂಗಳೂರು, ೧೯೯೮, ಪುಟ ೬.

## ಅಧ್ಯಾಯ - ೨

# ಪೂರಕ ಸಾಹಿತ್ಯ ಹಾಗೂ ಗ್ರಂಥಗಳ ಪರಾಮರ್ಶನೆ

೨. ೧ ಕಲಿಕಾ ಕನಿಷ್ಠ ಮಟ್ಟಗಳಿಗೆ ಸಂಬಂಧಿಸಿದ ವರದಿಗಳು ಮತ್ತು ದಾಖಲೆಗಳು

೨. ೨ ಕಲಿಕಾ ಕನಿಷ್ಠ ಹಂತಗಳ ಮೇಲಿನ ಅಧ್ಯಯನಗಳು

೨. ೩ ಜಿಲ್ಲಾ ಪ್ರಾಥಮಿಕ ಶಿಕ್ಷಣ ಯೋಜನೆ ಅಡಿಯಲ್ಲಿಯ ಗ್ರಂಥಗಳು ಹಾಗೂ ದಾಖಲೆಗಳು

## ಪೂರಕ ಸಾಹಿತ್ಯ ಹಾಗೂ ಗ್ರಂಥಗಳ ಪರಾಮರ್ಶನೆ

ಯಾವುದೇ ಉತ್ತಮ ಸಂಶೋಧನೆಯು ಆಯಾ ವಿಷಯಕ್ಕೆ ಸಂಬಂಧಿಸಿದ ಸೂಕ್ತ ಗ್ರಂಥಗಳು, ಪುರಾವೆಗಳ ಪುನರಾವಲೋಕನದೊಂದಿಗೆ ಬೆಂಬಲಿತವಾಗಿರಬೇಕು. ಈ ನಿರ್ದಿಷ್ಟ ಕಾರಣಕ್ಕಾಗಿ ಇದೇ ಅಧ್ಯಾಯದಲ್ಲಿ ಸಂಶೋಧನಾ ವಿಷಯಕ್ಕೆ ಸಂಬಂಧಿಸಿದ ಇತ್ತೀಚಿನ ಗ್ರಂಥಗಳ ಹಾಗೂ ಲೇಖನಗಳ ಪುನರಾವಲೋಕನ ಮಾಡಲಾಗಿದೆ.

ಪ್ರಸ್ತುತ ಅಧ್ಯಾಯಕ್ಕೆ ಸಂಗತವಾದ ಸಾಹಿತ್ಯವನ್ನು ಪ್ರಸ್ತುತ ಪಡಿಸುವ ಅನುಕೂಲಕ್ಕೋಸ್ಕರ ಮೂರು ಪಂಗಡಗಳಾಗಿ ಈ ಕೆಳಗಿನಂತೆ ವರ್ಗೀಕರಿಸಲಾಗಿದೆ.

೨. ೧. ಕಲಿಕಾ ಕನಿಷ್ಠ ಕಲಿಕಾ ಮಟ್ಟಗಳಿಗೆ ಸಂಬಂಧಿಸಿದ ವರದಿಗಳು ಮತ್ತು ದಾಖಲೆಗಳು.

೨. ೨. ಕಲಿಕಾ ಕನಿಷ್ಠ ಹಂತದ ಮೇಲಿನ ಅಧ್ಯಯನಗಳು.

೨. ೩. ಜಿಲ್ಲಾ ಪ್ರಾಥಮಿಕ ಶಿಕ್ಷಣ ಯೋಜನೆ ಅಡಿಯಲ್ಲಿಯ ಪುಸ್ತಕಗಳ ಪುನರಾವಲೋಕನ.

### ೨. ೧. ಕಲಿಕಾ ಕನಿಷ್ಠ ಮಟ್ಟಗಳಿಗೆ ಸಂಬಂಧಿಸಿದ ವರದಿಗಳು ಮತ್ತು ದಾಖಲೆಗಳು

ಪ್ರಾಥಮಿಕ ಶಿಕ್ಷಣದ ಸಾರ್ವತ್ರೀಕರಣ ಕಾರ್ಯಕ್ರಮದ ಅವಿಭಾಜ್ಯ ಅಂಗವಾಗಿ ಕಲಿಕಾ ಕನಿಷ್ಠಮಟ್ಟಗಳನ್ನು ರೂಪಿಸಲಾಗಿದೆ. ಕಲಿಕಾ ಕನಿಷ್ಠ ಹಂತಗಳನ್ನು ಅಳವಡಿಸಿ ''ಪ್ರಾಥಮಿಕ ಶಿಕ್ಷಣವನ್ನು ಸಾರ್ವತ್ರೀಕರಿಸುವ'' ಅವಶ್ಯಕತೆಯನ್ನು ೧೯೭೮ರಲ್ಲಿ ಪ್ರಕಟಗೊಂಡ 'ರತ್ನಾಯಿಕೆ ವರದಿ' ಒತ್ತಿ ಹೇಳಿತು.

ಸಾರ್ವತ್ರೀಕರಣದ ಹಿನ್ನೆಲೆಯಲ್ಲಿ 'ಪ್ರಾಥಮಿಕ ಶಿಕ್ಷಣದ ಸುಧಾರಣೆಗಳು'(Primary education reforms in the concept of universalization) ಎಂಬ ವಿಷಯದ ಮೇಲೆ ಜೆ. ರತ್ನಾಯಿಕೆ, ಭಾರತ ಸರ್ಕಾರದ ಅಣತಿಯ ಅನ್ವಯ ಸಲ್ಲಿಸಿದರು.

ವಿದ್ಯಾರ್ಥಿ ಯಾವುದೇ ಮಾಧ್ಯಮದಲ್ಲಿ ಕಲಿಯುತ್ತಿರಲಿ ವಿದ್ಯಾರ್ಥಿಯ ಅಖಂಡ ಕನಿಷ್ಠ ಕಲಿಕೆಯನ್ನು ಅತಿ ಮುಖ್ಯ ಸಾಮರ್ಥ್ಯಗಳ ಆಧಾರದ ಮೇಲೆ ತೀರ್ಮಾನಿಸಲು ಈ ವರದಿ ಸಲಹೆ ನೀಡಿತು.

ಈ ಸಲಹೆ ಅನ್ವಯ ಎನ್.ಸಿ.ಇ.ಆರ್.ಟಿ. (ರಾಷ್ಟ್ರೀಯ ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿ ಆಯೋಗ)ಯ ಪ್ರಾಥಮಿಕ ಪಠ್ಯ ಅಭಿವೃದ್ಧಿ ಘಟಕದ ಸದಸ್ಯರು ಮತ್ತು ರಾಜ್ಯ ಶಿಕ್ಷಣ ವಿದ್ಯಾಲಯಗಳ ಕೆಲವು ನಿರ್ದೇಶಕರನ್ನೊಳಗೊಂಡ ಒಂದು ಕಾರ್ಯತಂಡವನ್ನು ರಚಿಸಲಾಯಿತು. ಅದು ನವದೆಹಲಿಯ ಎನ್.ಸಿ.ಇ.ಆರ್.ಟಿ.ಯ ಆವರಣದಲ್ಲಿ ೧೯೭೮ರ ನವ್ಹಂಬರ್ ೮ ಮತ್ತು ೯ರಂದು ಸಭೆ ಸೇರಿ ಅಖಂಡ ಕನಿಷ್ಠ ಕಲಿಕೆಯನ್ನು ಅಭಿವೃದ್ಧಿ ಪಡಿಸುವ ಮಾರ್ಗದರ್ಶಿ ಸೂತ್ರಗಳ ಕುರಿತು ಚರ್ಚಿಸಲಾಯಿತು.

ಈ ಮಾರ್ಗದರ್ಶಿಗಳ ಅನುಸಾರವಾಗಿ 'ಪ್ರಾಥಮಿಕ ಶಿಕ್ಷಣ ಪಠ್ಯ ನವೀಕರಣ ಹಾಗೂ ಸಮುದಾಯ ಶಿಕ್ಷಣ ಮತ್ತು ಪಾಲ್ಗೊಳ್ಳುವಿಕೆಯಲ್ಲಿನ ಅಭಿವೃದ್ಧಿ ಚಟುವಟಿಕೆಗಳು' ಎಂಬ ಯೋಜನೆಯಲ್ಲಿ ಪಾಲ್ಗೊಂಡ ೧೫ ರಾಜ್ಯಗಳ 'ರಾಜ್ಯ ಪ್ರಾಥಮಿಕ ಪಠ್ಯ ಅಭಿವೃದ್ಧಿ ಘಟಕ'ದ ಸದಸ್ಯರುಗಳು ಅಖಂಡ ಕನಿಷ್ಠ ಕಲಿಕೆಯ ಪ್ರಥಮ ಕರಡನ್ನು ಸ್ವತಂತ್ರವಾಗಿ ಅಭಿವೃದ್ಧಿ ಪಡಿಸಿದರು.

೨. ಮುಂದಿನ ಹೆಜ್ಜೆಯಾಗಿ ೧೯೭೮ರ ಡಿಸೆಂಬರ್ ೧೧ ರಿಂದ ೨೨ರವರೆಗೆ ನವದೆಹಲಿಯ ಎನ್.ಸಿ.ಇ.ಆರ್.ಟಿ.ಯಲ್ಲಿ ರಾಷ್ಟ್ರಮಟ್ಟದ ಕಾರ್ಯಗಾರ ನಡೆಯಿತು. ೧೩ ರಾಜ್ಯಗಳು ಈ ಕಾರ್ಯಕ್ರಮದಲ್ಲಿ ಪಾಲ್ಗೊಂಡಿದ್ದವು. ರಾಜ್ಯಗಳ ಮತ್ತು ಎನ್.ಸಿ.ಇ.ಆರ್.ಟಿಯ ತಂಡಗಳು ನಡೆಸಿದ ಚರ್ಚೆಯ ಮತ್ತು ಕಾರ್ಯದ ಫಲವಾಗಿ ಕರಡು "ಮುಂದುವರಿದ ಕಲಿಕಾ ಕನಿಷ್ಠ ಹಂತ" ರೂಪುಗೊಂಡಿತು. ಅದರ ಜೊತೆಯಲ್ಲೇ ಕಾಲ ನಿರ್ದಿಷ್ಟದ ಸರಪಣಿಯನ್ನು ತಯಾರಿಸಲಾಯಿತು. ಇದನ್ನು ಯೋಜನೆ ೨ ಮತ್ತು ೩ರಲ್ಲಿ ಪಾಲ್ಗೊಂಡ ೧೫ ರಾಜ್ಯಗಳಲ್ಲಿ ಪ್ರಯೋಗಾರ್ಥ ಪರೀಕ್ಷಿಸಲು ತೀರ್ಮಾನಿಸಲಾಯಿತು. ಇದಲ್ಲದೆ ಶಿಕ್ಷಕರ ಶಿಕ್ಷಕ ತರಬೇತುದಾರರ ಹಾಗೂ ಸಮುದಾಯದ ಸದಸ್ಯರ ಸಲಹೆಗಳನ್ನು ಪಡೆದು ರಾಜ್ಯವಾರು ವರದಿಗಳು ರೂಪುಗೊಂಡವು. ಪ್ರತಿ ರಾಜ್ಯಗಳ "ಮುಂದುವರಿದ ಕಲಿಕಾ ಕನಿಷ್ಠ ಹಂತ"ದ ಪುನರಾವರ್ತಿತ ಕರಡನ್ನು ಹಿಮಾಚಲ ಪ್ರದೇಶದ ಚಂಬಾದಲ್ಲಿ ೧೯೭೯ರ ಮೇ ೨೭ರಿಂದ ೩೧ರವರೆಗೆ ನಡೆದ ಎರಡನೇ ರಾಷ್ಟ್ರಮಟ್ಟದ ಕಾರ್ಯಗಾರದಲ್ಲಿ ಚರ್ಚಿಸಲಾಯಿತು.

ವಿದ್ಯಾಭ್ಯಾಸದ ವಿವಿಧ ಹಂತಗಳನ್ನು ಮುಗಿಸಿದ ವಿದ್ಯಾರ್ಥಿಗಳು ಹೊಂದಲೇಬೇಕಾದ ಕಲಿಕಾ ಕನಿಷ್ಠ ಹಂತಗಳನ್ನು ನಿರ್ದಿಷ್ಟ ಪಡಿಸುವ ಅವಶ್ಯಕತೆ ಇದೆ. ಇದರ ಕಡೆ ಗಮನ ಹರಿಸಲು ರಾಷ್ಟ್ರೀಯ ಶಿಕ್ಷಣ ಆಯೋಗ ೧೯೬೬ ಮತ್ತು

ಪುನರಾವರ್ತಿತ ರಾಷ್ಟ್ರೀಯ ಶಿಕ್ಷಣ ಆಯೋಗ ೧೯೯೨ ಒತ್ತಿ ಹೇಳಿದವು. ಈ ನಿರ್ದೇಶನವನ್ನು ಗಮನದಲ್ಲಿಟ್ಟುಕೊಂಡು ಎಂಟನೇ ಪಂಚವಾರ್ಷಿಕ ಯೋಜನೆ ಬಾಲ್ಯ ಪೂರ್ವಶಿಕ್ಷಣ ಮತ್ತು ಪ್ರಾಥಮಿಕ ಶಿಕ್ಷಣಕ್ಕೆ ಸಂಬಂಧಿಸಿದಂತೆ ರಚಿತವಾದ ಕಾರ್ಯತಂಡ ನೀಡಿದ ವರದಿಯು "ಪ್ರಾಥಮಿಕ ಶಿಕ್ಷಣದಲ್ಲಿ ಮಕ್ಕಳ ಪಾಲ್ಗೊಳ್ಳುವಿಕೆ"ಗೆ ಸಂಬಂಧಿಸಿದಂತೆ ಮಾತ್ರ ಗುರಿಗಳನ್ನು ನಿಗದಿಪಡಿಸದೆ ಗುಣಮಟ್ಟಕ್ಕೆ ಸಂಬಂಧಿಸಿದಂತೆಯೂ ಗುರಿಗಳನ್ನು ನಿಗದಿಪಡಿಸಲು ಶಿಫಾರಸ್ಸು ಮಾಡಿತು.

ಕಿರಿಯ ಪ್ರಾಥಮಿಕ ಮತ್ತು ಹಿರಿಯ ಪ್ರಾಥಮಿಕ ಹಂತದ ನಂತರ ವಿದ್ಯಾರ್ಥಿಗಳು ಗಳಿಸಬೇಕಾದ ಕನಿಷ್ಠ ಕಲಿಕೆಯನ್ನು ಖಚಿತ ಪಡಿಸುವ ಮತ್ತು ಕಲಿಕಾ ಕನಿಷ್ಠ ಸಾಮರ್ಥ್ಯಗಳನ್ನು ಮೌಲ್ಯ ಮಾಪನ ಮಾಡುವ ವ್ಯವಸ್ಥೆಯನ್ನು ನಿರ್ಮಿಸಬೇಕಾದ ಅಗತ್ಯವನ್ನು ಮೇಲಿನ ಕಾರ್ಯ ತಂಡದಲ್ಲಿ ವರದಿಯು ಒತ್ತಿ ಹೇಳಿತು.

ಭಾರತ ಸರ್ಕಾರದ ಮಾನವ ಸಂಪನ್ಮೂಲ ಅಭಿವೃದ್ಧಿ ಇಲಾಖೆಯು ೧೯೮೬ರ ರಾಷ್ಟ್ರೀಯ ಶಿಕ್ಷಣ ನೀತಿಯನ್ನು ಆಧರಿಸಿ 'ಕ್ರಿಯಾ ಕಾರ್ಯಕ್ರಮ' (Programme of Act...) ಎಂಬ ವರದಿಯನ್ನು ಹೊರತಂದಿತು.

'ಪ್ರಾಥಮಿಕ ಶಿಕ್ಷಣದ ಕಾರ್ಯ ವಿಧಾನ ಮತ್ತು ಸಾರಾಂಶ ಎಂಬ ಶಿರೋನಾಮದ ಅಧ್ಯಾಯದಲ್ಲಿ ಈ ರೀತಿ ಹೇಳಲಾಗಿದೆ. "ವಿದ್ಯಾಭ್ಯಾಸದ ವಿವಿಧ ಹಂತಗಳಲ್ಲಿ ಕಲಿಕಾ ಕನಿಷ್ಠ ಹಂತಗಳು" ಎಂಬ ಮಾದರಿಯ ಪ್ರಸ್ತಾವನೆ ಅದನ್ನು ಸಾದರಪಡಿಸಲು ಅವಕಾಶ ಮಾಡಿಕೊಡುವ ಕನಿಷ್ಠ ಅನುಕೂಲಗಳು ಕಲಿಕೆಯನ್ನು ಅತಿ ನಿಧಾನ, ನಿಧಾನ ಕಲಿಕೆಯುಳ್ಳ ಮಕ್ಕಳಿಗೂ ಸಹ ಅಹ್ಲಾದಕರ ಅನುಭವ ನೀಡುವಂತೆ ಮಾಡಬೇಕು ಎಂಬುದು ಈ ಯೋಜನೆಯ ಉದ್ದೇಶವಾಗಿದೆ.

ಇದರ ಫಲವಾಗಿ ಎನ್.ಸಿ.ಇ.ಆರ್.ಟಿಯು ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣದ ರಾಷ್ಟ್ರೀಯ ಪಠ್ಯಕ್ರಮವೆಂಬ ದಾಖಲೆಯನ್ನು ಹೊರತಂದಿತು. ಪ್ರತಿ ವಿಷಯದ ವ್ಯಾಪ್ತಿ ಮತ್ತು ಆಳವನ್ನು ಸ್ಪಷ್ಟ ಪಡಿಸುವ ಸಾಮಾನ್ಯ ಅಧ್ಯಯನ ಯೋಜನೆಯ ವೈಶಿಷ್ಟ್ಯವು ಈ ರಾಷ್ಟ್ರೀಯ ಪಠ್ಯಕ್ರಮದ ತಿರುಳಾಗಿದೆ ಎಂದು ಎನ್.ಸಿ.ಇ.ಆರ್.ಟಿ.ಯ ಮೇಲೆ ಹೇಳಿದ ದಾಖಲೆ ತಿಳಿಸಿತು. ಸಾಮಾನ್ಯ ಯೋಜನೆಯು ಅವಶ್ಯಕ ಕಲಿಕಾ ಹಂತಗಳನ್ನು ಒದಗಿಸುವುದಾಗಿದ್ದು ಅದು ರಾಷ್ಟ್ರೀಯ ಪಠ್ಯಕ್ರಮದ ಮುಖ್ಯ ಉದ್ದೇಶಗಳನ್ನು ಈಡೇರಿಸುವ ಸಾಧನವಾಗಿತ್ತು. ಎಲ್ಲ ವಿದ್ಯಾರ್ಥಿಗಳು ಕಲಿಯ ಬೇಕಾದ ಅವಶ್ಯಕ ಕಲಿಕೆಯನ್ನು ಕೇಂದ್ರವಾಗಿಟ್ಟುಕೊಂಡು ರಾಷ್ಟ್ರೀಯ ಪಠ್ಯಕ್ರಮ ರೂಪುಗೊಂಡಿತು. ಹೀಗೆ ರಾಷ್ಟ್ರೀಯ ಪಠ್ಯಕ್ರಮವು ಎಲ್ಲಾ ವಿದ್ಯಾರ್ಥಿಗಳು, ಅಧ್ಯಯನದ ನಂತರ ನಿರೀಕ್ಷಿಸಬಹುದಾದ ಅವಶ್ಯಕ ಕಲಿಕೆಗಳನ್ನು ಕೊಡುವಂತಹ

ಮತ್ತು ಇಡೀ ದೇಶದಲ್ಲಿ ಪ್ರಾಥಮಿಕ ಶಿಕ್ಷಣವು ಮೂಲಭೂತ ಏಕರೂಪತೆಯನ್ನು ಮತ್ತು ಏಕಗುಣಮಟ್ಟವನ್ನು ನೀಡುವಂತಹದ್ದಾಗಿತ್ತು. 'ಅಲ್ಲದೇ ಶೈಕ್ಷಣಿಕ ಪರೀಕ್ಷಾ ಸೇವೆ'(Educational testing service)ಯನ್ನು ಅಭಿವೃದ್ಧಿ ಪಡಿಸಿ ಆ ಮೂಲಕ 'ಶೈಕ್ಷಣಿಕ ಪರೀಕ್ಷಾ ಸೇವೆ' ಎಲ್ಲಾ ಶಿಕ್ಷಕ ಹಾಗೂ ಶಿಕ್ಷಣ ಆಡಳಿತಗಾರರಿಗೆ ದೊರಕುವಂತಾಗಿ ಅವರು ಶಿಕ್ಷಣ ಸಂಸ್ಥೆಗಳ ಸಾಧನೆಯನ್ನು ನಿರ್ಣಯಿಸಲು ಸಾಧ್ಯವಾಗಬೇಕೆಂದು ಎನ್.ಐ.ಸಿ.ಇ.ಆರ್.ಟಿ.ಯ ಮೇಲೆ ಹೇಳಿದ ದಾಖಲೆಯು ಸಲಹೆ ನೀಡಿತು.

**ಕಲಿಕಾ ಕನಿಷ್ಠ ಹಂತದ ಮೇಲಿನ ಸಮಿತಿಗಳು :** ೧೯೯೦ರ ೫ನೇ ಜನವರಿಯಂದು ಕೇಂದ್ರ ಸರಕಾರದ 'ಮಾನವ ಸಂಪನ್ಮೂಲ ಅಭಿವೃದ್ಧಿ' ಮಂತ್ರಾಲಯವು ಕಲಿಕಾ ಕನಿಷ್ಠ ಹಂತಕ್ಕೆ ಸಂಬಂಧಿಸಿದಂತೆ ಸಮಿತಿಯೊಂದನ್ನು ನೇಮಿಸಿತು. ಸಮಿತಿಯ ವಿಷಯ ವ್ಯಾಪ್ತಿಯು ಈ ಕೆಳಕಂಡ ಅಂಶಗಳಿಗೆ ಸಂಬಂಧಿಸಿದ್ದಾಗಿತ್ತು.

i) ತರಗತಿ ೩ ಮತ್ತು ೫ಕ್ಕೆ ವಿದ್ಯಾರ್ಥಿಯು ಹೊಂದಬೇಕಾದ ಕನಿಷ್ಠ ಕಲಿಕೆಗಳನ್ನು ರಚಿಸುವುದು.

ii) ಕಲಿಕೆಯ ವ್ಯಾಪಕ ಮೌಲ್ಯಮಾಪನ ಮಾಡುವಂತಹ ವಿಧಾನವನ್ನು ಶಿಫಾರಸ್ಸು ಮಾಡುವುದು.

iii) ಕಲಿಕಾ ಕ್ಷೇತ್ರದ ತಿಳುವಳಿಕೆಯಿಲ್ಲದ ಭಾಗಗಳನ್ನು ಗುರುತಿಸಿ ಅವುಗಳನ್ನು ಅಧ್ಯಯನದ ಮೂಲಕ ಸುಧಾರಿಸುವ ದೃಢವಾದ ಮಾರ್ಗಗಳ ಕುರಿತು ಸಲಹೆ ನೀಡುವುದು.

ಮೇಲ್ಕಂಡ ವಿಷಯಗಳು ಸಾಂಪ್ರದಾಯಿಕ ಮತ್ತು ಅಸಂಪ್ರದಾಯಿಕ ಶಿಕ್ಷಣ ವ್ಯವಸ್ಥೆಗಳಿಗೂ ಸಂಬಂಧಿಸಿದ್ದಾಗಿವೆ ಎಂದು ಸಮಿತಿಗೆ ತಿಳಿಸಲಾಯಿತು.

ಸಮಿತಿಯು ಹನ್ನೊಂದು ಸದಸ್ಯರನ್ನು ಒಳಗೊಂಡಿತ್ತು. ಕನಿಷ್ಠ ಕಲಿಕೆಯನ್ನು 'ಜಾರಿಗೊಳಿಸುವ ಕಾರ್ಯ ಪದ್ಧತಿ'ಯನ್ನು ಸಿದ್ಧಪಡಿಸುವ ಜವಾಬ್ದಾರಿಯನ್ನು ಸಮಿತಿಗೆ ವಹಿಸಲಾಗಿತ್ತು. ಹಲವು ರಾಜ್ಯಗಳ ಶಿಕ್ಷಣ ತಜ್ಞರು ಹಾಗೂ ಶಿಕ್ಷಣ ಆಡಳಿತಗಾರರೊಂದಿಗೆ ಕೆಲವು ಸಭೆಗಳನ್ನು ನಡೆಸಿದ ನಂತರ ಸಮಿತಿಯು ನಿರ್ದಿಷ್ಟ ವ್ಯಕ್ತಿಗಳ ಸಮೂಹ ಹಾಗೂ ಸಂಸ್ಥೆಗಳು ಕಾರ್ಯಗೊಳಿಸಬೇಕಾದ ಕಲಿಕಾ ಕಲಿಷ್ಠ ಹಂತದ ಯೋಜನೆಗಳನ್ನು ರೂಪಿಸಿತು. ಅಂತಹ ಕೆಲವು ಸಂಸ್ಥೆಗಳನ್ನು ಈ ಅಧ್ಯಾಯದಲ್ಲಿ ಅವಲೋಕಿಸಲಾಗಿದೆ.

೧. ಲೇಡಿ ಇರ್ವಿನ್ ಕಾಲೇಜು, ನವದೆಹಲಿ

೨. ರಾಷ್ಟ್ರೀಯ ಶಿಕ್ಷಣ ಸಂಸ್ಥೆ, ಪೂನಾ

೩. ಕಲಿಕಾ ಸಂಪನ್ಮೂಲ ಕೇಂದ್ರ, ಪೂನಾ

೪. ಸಂಸ್ಕಾರ ಶಿಕ್ಷಣ ಸಮಿತಿ, ಭೂಪಾಲ

೫. ಅಹಮದಾಬಾದ್ ನಗರ ಪಾಲಿಕೆ, ಅಹಮದಾಬಾದ್

೬. ಮುಂಬಯಿ ನಗರ ಪಾಲಿಕೆ, ಮುಂಬಯಿ

೭. ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೮. ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆ ಸಂಸ್ಥೆ, ಬೆಂಗಳೂರು

ಕನಿಷ್ಠ ಕಲಿಕೆಗಳನ್ನು ಪಟ್ಟಿ ಮಾಡುವ ಮೊದಲ ಪ್ರಯತ್ನವನ್ನು ಎನ್.ಸಿ.ಇ.ಆರ್.ಟಿ.ಯು ಪಿ.ಇ.ಸಿ.ಆರ್. ಯೋಜನೆಯಡಿಯಲ್ಲಿ ಮಾಡಿತು. 'ಕಲಿಕಾ ಕನಿಷ್ಠ ಮುಂದುವರಿಕೆ' ಎಂಬ ಶೀರ್ಷಿಕೆಯಡಿಯಲ್ಲಿ ಅದು ಪ್ರಕಟಿಸಿತು. ಕನಿಷ್ಠ ಕಲಿಕಾ ಮುಂದುವರಿಕೆಯನ್ನು ಭಾಷೆ, ಗಣಿತ, ಪರಿಸರ ಅಧ್ಯಯನ, ಆರೋಗ್ಯಕರ ಜೀವನ, ಸಾಮಾಜಿಕವಾಗಿ ಉಪಯುಕ್ತ ಕೆಲಸಗಳು ಹಾಗೂ ರಚನಾತ್ಮಕ ಅಭಿವ್ಯಕ್ತಿ ಕ್ಷೇತ್ರಗಳಿಗೆ ಸಂಬಂಧಿಸಿದಂತೆ ನಿರ್ದಿಷ್ಟಪಡಿಸಲಾಯಿತು. ೧, ೨, ೩, ೪ ಮತ್ತು ೫ನೇ ತರಗತಿಯ ವಿದ್ಯಾರ್ಥಿಗಳು, ಮೇಲೆ ತಿಳಿಸಿದ ಕ್ಷೇತ್ರಗಳಲ್ಲಿ ಗಳಿಸಬೇಕಾದ ಸಾಮರ್ಥ್ಯಗಳನ್ನು ಈ ಕೆಳಗೆ ತಿಳಿಸಲಾಗಿದೆ.

ಕೇಂದ್ರ ಸರ್ಕಾರದ ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವಾಲಯವು ನೇಮಿಸಿದ ವರದಿಯನ್ನು ಆಧರಿಸಿ ಎನ್.ಸಿ.ಇ.ಆರ್.ಟಿ.ಯು ಕಲಿಕಾ ಸಾಮರ್ಥ್ಯಗಳ ಪಟ್ಟಿಯನ್ನು ೧೯೯೧ರಲ್ಲಿ ಪ್ರಕಟಿಸಿದ ಪುಸ್ತಕ 'ಪ್ರಾಥಮಿಕ ಹಂತದಲ್ಲಿ ಕನಿಷ್ಠ ಕಲಿಕಾ ಹಂತಗಳು'ದಲ್ಲಿ ನೀಡಲಾಯಿತು. ಈ ಪ್ರಕಟಣೆಯಲ್ಲಿ ಕೇವಲ ಭಾಷೆ, ಗಣಿತ ಹಾಗೂ ಪರಿಸರ ವಿಜ್ಞಾನ ಕ್ಷೇತ್ರಗಳನ್ನು ಮಾತ್ರ ಪರಿಗಣಿಸಲಾಗಿತ್ತು. ಅಲ್ಲದೇ, ಕಲಿಕಾ ಕ್ಷೇತ್ರದ ತಿಳುವಳಿಕೆಯಿಲ್ಲದ ಭಾಗಗಳ ಮೌಲ್ಯಮಾಪನ ಮತ್ತು ಕ್ರಿಯಾ ಯೋಜನೆಯ ಜಾರಿ ಇವುಗಳಿಗೆ ಸಂಬಂಧಿಸಿದ ಪರಿಚ್ಛೇದಗಳನ್ನು ಎನ್.ಸಿ.ಇ.ಆರ್.ಟಿ.ಯ ಮೇಲೆ ಹೇಳಿದ ಪ್ರಕಟಣೆ ಒಳಗೊಂಡಿತ್ತು.

ಪರಿಸರ ಅಧ್ಯಯನ (ವಿಜ್ಞಾನ) ವಿಷಯದಲ್ಲಿ ತರಗತಿ ೧, ೨, ೩, ೪ ಮತ್ತು ೫ಕ್ಕೆ ಸಂಬಂಧಿಸಿದ ಕಲಿಕಾ ಸಾಮರ್ಥ್ಯಗಳನ್ನು ಈ ಕೆಳಕಂಡ ಕ್ಷೇತ್ರಗಳಲ್ಲಿ ಯೋಜಿಸಲಾಗಿತ್ತು.

೧. ವಿದ್ಯಾರ್ಥಿಯು ಉತ್ತಮ ಆರೋಗ್ಯ ಕಾಪಾಡಿಕೊಳ್ಳಲು ಸಹಾಯವಾಗುವ ಅಂಶಗಳನ್ನು ಮನನ ಮಾಡಿಕೊಳ್ಳುವುದು.

೨. ವಿದ್ಯಾರ್ಥಿಯಲ್ಲಿ ತನ್ನ ಸುತ್ತಲಿನ ಪರಿಸರಕ್ಕೆ ಸಂಬಂಧಿಸಿದ ವಿಷಯವನ್ನು ಸಂಗ್ರಹಿಸಿ, ವರ್ಗೀಕರಿಸಿ ಸರಳ ಊಹೆಗಳನ್ನು ಮಾಡುವ ಸಾಮರ್ಥ್ಯವನ್ನು ಅಭಿವೃದ್ಧಿಪಡಿಸುವುದು.

೩. ವಿದ್ಯಾರ್ಥಿಯು ಜೀವರಹಿತ ವಸ್ತುಗಳ ಗುಣ ಲಕ್ಷಣಗಳನ್ನು ಗಮನಿಸಿ ಮತ್ತು ಪರೀಕ್ಷಿಸುವುದು.

೪. ಭೂಮಿ ಮತ್ತು ಆಕಾಶದಲ್ಲಿನ ಸಾಮಾನ್ಯ ವಿದ್ಯಾಮಾನಗಳನ್ನು ಗಮನಿಸಿ ವಿದ್ಯಾರ್ಥಿಯು ಊಹೆಗಳನ್ನು ಮಾಡುವ ಸಾಮರ್ಥ್ಯ.

ಕಲಿಕಾ ಸಾಮರ್ಥ್ಯಗಳನ್ನು ಪಟ್ಟಿ ಮಾಡುವ ಇನ್ನೊಂದು ಯೋಜನೆಯನ್ನು ೧೯೯೧ರಲ್ಲಿ ಗೋವಿಂದ ಮತ್ತು ವರ್ಗೀಸ್ ಎನ್ನುವವರು "ಭಾರತದಲ್ಲಿ ಮೂಲ ಶೈಕ್ಷಣಿಕ ಸೇವೆಯ ಗುಣಮಟ್ಟ ಮಧ್ಯಪ್ರದೇಶ ರಾಜ್ಯದ ಪ್ರಾಥಮಿಕ ಶಿಕ್ಷಣದ ಒಂದು ಅಧ್ಯಯನ" ಎಂಬ ಶಿರೋನಾಮದಡಿಯಲ್ಲಿ ಪ್ರಕಟಿಸಿದರು. "೧, ೨ ಮತ್ತು ೩ನೇ ಹಂತದಲ್ಲಿ ಗಳಿಸಬೇಕಾದ ಕಲಿಕಾ ಸಾಮರ್ಥ್ಯಗಳನ್ನು ಮತ್ತು ೨, ೩ ಮತ್ತು ೪ನೆಯ ತರಗತಿಯಲ್ಲಿ ಗಳಿಸಬೇಕಾದ ಕಲಿಕಾ ಸಾಮರ್ಥ್ಯಗಳನ್ನು ಈ ಯೋಜನೆಯಲ್ಲಿ ಪಟ್ಟಿ ಮಾಡಲಾಯಿತು. ಪರಿಸರ ಅಧ್ಯಯನ (ವಿಜ್ಞಾನ)ದ ಮೇಲಿನ ಪಟ್ಟಿಯು 'ಕಲಿಕಾ ಕನಿಷ್ಠ ಹಂತ (Minimum Levels of Learning)'ಕ್ಕೆ ಸಂಬಂಧಿಸಿದ ಎಲ್ಲಾ ಪ್ರಕಟಣೆಗಳಲ್ಲಿ ಸೂಚಿಸಿದ ಎಲ್ಲಾ ಕ್ಷೇತ್ರಗಳ ಕಲಿಕಾ ಸಾಮರ್ಥ್ಯಗಳನ್ನು ಒಳಗೊಂಡಿತ್ತು.

ಮೂರು ಪಟ್ಟಿಗಳು ಭಾಗಶಃ ಆಗಿದ್ದು ಕೇವಲ ಸಾಮರ್ಥ್ಯಗಳನ್ನು ವಿವಿಧ ಹಂತದಲ್ಲಿ ವರ್ಗೀಕರಿಸುವ ವಿಷಯದಲ್ಲಿ ಮಾತ್ರ ಭಿನ್ನವಾಗಿದ್ದವು.

### ೨. ೨. ಕಲಿಕಾ ಕನಿಷ್ಠ ಹಂತಗಳ ಮೇಲಿನ ಅಧ್ಯಯನಗಳು

ಭಾರತದಲ್ಲಿನ ಪ್ರಾಥಮಿಕ ಗುಣಮಟ್ಟದ ಮೇಲೆ ಸಾಕಷ್ಟು ಸಂಶೋಧನೆಗಳು ನಡೆದಿವೆ. ಪ್ರಥಮ ಹಂತದ ಶಿಕ್ಷಣದಿಂದ ಹೊರಹೊಮ್ಮುವ ನಿರ್ಣಾಯಕ ಅಂಶಗಳ ಮೇಲೆ ಕೇಂದ್ರೀಕರಿಸಿ ಸುಮಾರು ೨೦೦ ಅಧ್ಯಯನಗಳನ್ನು ೧೯೮೩ರಲ್ಲಿ ಬುಚ್ ಮತ್ತು ಬುಚ್ ಅವಲೋಕಿಸಿದರು. ವಿದ್ಯಾರ್ಥಿಗಳ ಸಾಧನೆಗಳನ್ನು ಕೆಳಕಾಣಿಸಿದ ಮೂರು ಗುಣಲಕ್ಷಣಗಳೊಂದಿಗೆ ಮೆಲುಕು ಹಾಕಲಾಯಿತು ಅವುಗಳೆಂದರೆ,

೧. ಕುಟುಂಬದ ಗುಣಲಕ್ಷಣಗಳು

೨. ಶಾಲಾ ಗುಣಲಕ್ಷಣಗಳು

೩. ವೈಯಕ್ತಿಕ ಗುಣಲಕ್ಷಣಗಳು

ಕಲಿಯುವ ವಿದ್ಯಾರ್ಥಿಯ ಪ್ರಗತಿಯ ಮೇಲೆ ಶಾಲಾ ಅಂಶಗಳು ಮಹತ್ತರ ಪ್ರಭಾವ ಬೀರುವುದನ್ನು ೧೯೮೮ ಮತ್ತು ೧೯೮೫ರಲ್ಲಿ ಅನುಕ್ರಮವಾಗಿ ಅಧ್ಯಯನ ನಡೆಸಿದ ಚಕ್ರವರ್ತಿ ಮತ್ತು ದೇಸಾಯಿಯವರ ಸಂಶೋಧನೆಗಳು ದೃಢಪಡಿಸಿದವು. ೧೯೮೩ ಮತ್ತು ೧೯೮೪ರಲ್ಲಿ ಅನುಕ್ರಮವಾಗಿ ಮಲಿಕ್ ಮತ್ತು ಸರ್ಕಾರ್ ಎನ್ನುವವರು ನಡೆಸಿದ ಅಧ್ಯಯನಗಳು ಕಲಿಕೆಯ ಮೇಲೆ ಮನೆಯ ಕೆಲವು ಅಂಶಗಳು ಮಹತ್ತರ ಪ್ರಭಾವ ಬೀರುವಿಕೆಯನ್ನು ಹೇಳಿದವು.

೧೯೮೮ರಲ್ಲಿ ಸುಮಾರು ದೇಶದಾದ್ಯಂತ ಹರಡಿರುವ ಪ್ರಾಥಮಿಕ ಶಾಲೆಗಳಿಂದ ಆಯ್ದು ೩ ಲಕ್ಷ ವಿದ್ಯಾರ್ಥಿಗಳನ್ನೊಳಗೊಂಡ ಬೃಹತ್ ಪ್ರಮಾಣದ ಕಲಿಕಾ ಮೌಲ್ಯಮಾಪನವನ್ನು ದಾವೆ ಮತ್ತು ಸಂಗಡಿಗರು ನಡೆಸಿದರು. ರಾಷ್ಟ್ರೀಯ ಮಟ್ಟದಲ್ಲಿ ಕೈಗೊಳ್ಳಲಾದ ವಿಶೇಷ ಪಠ್ಯಕ್ರಮ ಪುನರಾವಲೋಕನ ಯೋಜನೆಯಿಂದ ವಿದ್ಯಾರ್ಥಿಗಳಲ್ಲಿ ಉಂಟಾಗಿರುವ ಕಲಿಕಾ ಸಾಮರ್ಥ್ಯಗಳನ್ನು ಪೂರ್ವ ನಿರ್ಧರಿತ ಕಲಿಕಾ-ಸಾಮರ್ಥ್ಯಗಳೊಂದಿಗೆ ಹೋಲಿಸಿ, ಪ್ರಾಥಮಿಕ ಶಾಲಾ ವಿದ್ಯಾರ್ಥಿಗಳ ಕಲಿಕಾ ಸಾಮರ್ಥ್ಯವನ್ನು ಅಂದಾಜು ಮಾಡುವುದು ಅಧ್ಯಯನದ ಉದ್ದೇಶವಾಗಿತ್ತು. ಅಧ್ಯಯನದಿಂದ ಸಂಗ್ರಹವಾದ ದತ್ತಾಂಶಗಳು ವಿದ್ಯಾರ್ಥಿಗಳು ೩ನೇ ಹಂತ ಪ್ರವೇಶಿಸಿದ ನಂತರ ಅವರ ಸಾಧನಾ ಮಟ್ಟದಲ್ಲಿ ಅನಿರೀಕ್ಷಿತ ಕುಸಿತ ಉಂಟಾಗಿ ಅದು ವರ್ಗ IV ಮತ್ತು V ವರ್ಗ ರ ತನಕ ಮುಂದುವರಿಯುವುದನ್ನು (ಎಲ್ಲಾ ವಿಷಯಗಳಲ್ಲಿ) ಬಿಂಬಿಸಿದವು. ೧೯೮೪ರಲ್ಲಿ ಗೋಗಟೆವರು ಕೈಗೊಂಡ ಸಣ್ಣ ಪ್ರಮಾಣದ ಮೌಲ್ಯಮಾಪನ ಸರ್ವೇಕ್ಷಣೆಯಲ್ಲಿ ಭಾಷೆ, ಅಂಕಗಣಿತ, ಸಾಮಾನ್ಯ ಜ್ಞಾನ ವಿಷಯಗಳಲ್ಲಿ ೫ ವರ್ಷದ ಪ್ರಾಥಮಿಕ ಶಿಕ್ಷಣವನ್ನು ಪೂರೈಸಿದ ಮಕ್ಕಳ ಸಾಧನೆಯನ್ನು ಪರೀಕ್ಷೆಗೊಳಪಡಿಸಲಾಯಿತು. ವರ್ಗ ೧, ೨, ೩ ಮತ್ತು ೪ಕ್ಕೆ ಸಂಬಂಧಿಸಿದ ೪ ವಿಭಾಗಗಳನ್ನು ಪರೀಕ್ಷೆಯು ಒಳಗೊಂಡಿತ್ತು. ಗ್ರಾಮೀಣ ಮತ್ತು ನಗರ ವಿದ್ಯಾರ್ಥಿಗಳ ಸರಾಸರಿ ಸಾಧನೆಯಲ್ಲಿ ಗಣನೀಯ ವ್ಯತ್ಯಾಸ ವಿಲ್ಲದಿರುವುದನ್ನು ಅಧ್ಯಯನವು ಪ್ರಚುರಪಡಿಸಿತು. ಎಲ್ಲಾ ವಿಷಯಗಳಲ್ಲೂ ಸಾಮಾನ್ಯ ಸಾಧನಾ ಮಟ್ಟವನ್ನು ಪರಿಗಣಿಸಲಾಗಿ, ವರ್ಗ Vರ ವಿದ್ಯಾರ್ಥಿಗಳು ಕೇವಲ ವರ್ಗ IIರ ವಿದ್ಯಾರ್ಥಿಗಳ ಸಾಧನೆಯ ಮಟ್ಟಕ್ಕೆ ಸಮಾನರಾಗಿರುವುದನ್ನು ಅಧ್ಯಯನ ಬೆಳಕಿಗೆ ತಂದಿತು.

ವರ್ಗ IVರ ವಿದ್ಯಾರ್ಥಿಗಳ ಗಣಿತ ವಿಷಯದ ಸಾಧನೆಯನ್ನು ಅಂದಾಜು ಮಾಡುವ ಉದ್ದೇಶವನ್ನು ೧೯೯೧ರಲ್ಲಿ ಗೋವಿಂದ ಮತ್ತು ವರ್ಗೀಸ್ ಎನ್ನುವವರು ನಡೆಸಿದ ಅಧ್ಯಯನವು ಹೊಂದಿತ್ತು. "ಭಾರತದಲ್ಲಿನ ಪ್ರಾಥಮಿಕ ಶಿಕ್ಷಣದ ಗುಣಮಟ್ಟ ಮಧ್ಯಪ್ರದೇಶ ರಾಜ್ಯದಲ್ಲಿ ಪ್ರಾಥಮಿಕ ಶಿಕ್ಷಣದ ಅಧ್ಯಯನ" ಎನ್ನುವುದು ಅಧ್ಯಯನದ ಶಿರೋನಾಮೆಯಾಗಿತ್ತು. ಸಂಶೋಧಕರು ವರ್ಗ IVನ್ನು ಶೈಕ್ಷಣಿಕ ಸಾಧನೆಯ ಓರೆಗಲ್ಲು ಹಂತವನ್ನಾಗಿ ಆಯ್ಕೆ

ಮಾಡಿರುವುದನ್ನು ಈ ರೀತಿ ಸಮರ್ಥಿಸಿಕೊಂಡಿದ್ದಾರೆ. "ಸಾಕ್ಷರತೆಯನ್ನು ಅಳತೆ ಮಾಡಲು ೪ ವರ್ಷಗಳ ಆರಂಭಿಕ ಪ್ರಾಥಮಿಕ ಶಿಕ್ಷಣದ ಆ ಹಂತ ಅತಿ ಸೂಕ್ತ ಏಕೆಂದರೆ ಭಾರತದ ಬಹುತೇಕ ಭಾಗಗಳಲ್ಲಿ ವರ್ಗ IV ಪ್ರಾಥಮಿಕ ಶಿಕ್ಷಣದ ಮುಕ್ತಿಯ ಹಂತವಾಗಿದೆ".

ಅಧ್ಯಯನವು ಕಲಿಕೆಯ ವಿದ್ಯಾರ್ಥಿ ಭೇದಕಾರಕ ಅಂಶಗಳಾದ

೧. ಲಿಂಗ, ಮಾತಾಪಿತೃಗಳು, ಉದ್ಯೋಗ, ಶಿಕ್ಷಣ, ವಿದ್ಯಾರ್ಥಿಗಳ ಶಾಲಾ ಪೂರ್ವ ಶಿಕ್ಷಣ, ಶಾಲೆಯಲ್ಲಿ ಮತ್ತು ಮನೆಯಲ್ಲಿನ ಭಾಷೆ

೨. ಶಿಕ್ಷಕ ಭೇದಕಾರಕ ಅಂಶಗಳಾದ ಶಿಕ್ಷಕರ ಜಾತಿ, ವಿದ್ಯಾರ್ಹತೆ, ತರಬೇತಿ, ವಯಸ್ಸು, ಅನುಭವ, ಕಲಿಸುವ ವಿಷಯ

೩. ಶಾಲೆಯಲ್ಲಿನ ಅನುಕೂಲಗಳು

೪. ವಿವಿಧ ಹಂತದ ಅಧ್ಯಾಪನ

೫. ಮೂಲ ಸೌಕರ್ಯಗಳು

೬. ಶಾಲಾ ಆಡಳಿತ

ಸಾಧನೆಯನ್ನು ಪರೀಕ್ಷಿಸುವ ಪರೀಕ್ಷೆಯು ೩ ಭಾಗಗಳಾಗಿ ವಿಭಾಗಿಸಲಾಗಿತ್ತು. ಹಂತ ೧, ೨ ಮತ್ತು ೩ ಇವುಗಳು ಅನುಕ್ರಮವಾಗಿ ೧೧, ೧೪ ಮತ್ತು ೧೯ ಸಾಮರ್ಥ್ಯಗಳನ್ನು ಒಳಗೊಂಡಿದ್ದವು. ಮೂರು ಹಂತದಲ್ಲಿ ಇರುವ ಕಲಿಕಾ ಸಾಮರ್ಥ್ಯಗಳು ಅನುಕ್ರಮವಾಗಿ ವರ್ಗ ೨, ೩ ಹಾಗೂ ೪ರ ಕೊನೆಯಲ್ಲಿ ವಿದ್ಯಾರ್ಥಿಗಳು ಪಡೆದಿರಬೇಕಾದ ಸಾಮರ್ಥ್ಯಗಳಾಗಿದ್ದವು.

ಸಂಶೋಧನೆಯ ಫಲಿತಾಂಶಗಳು ಹೇಳುವುದೇನೆಂದರೆ, ವಿದ್ಯಾರ್ಥಿಯು ಕಲಿಯುತ್ತಿರುವ ಶಾಲೆಯ ಸ್ಥಳ ಮತ್ತು ಶಾಲೆಯ ಆಡಳಿತ ವರ್ಗ ವಿದ್ಯಾರ್ಥಿಯು ಹೊಂದುವ ಸಾಮರ್ಥ್ಯಗಳಿಗೆ ನೇರ ಕಾರಣವಾಗುತ್ತವೆ. (ಸಂಶೋಧನೆ ವರ್ಗ ೪ಕ್ಕೆ ಸೇರಿದ ವಿದ್ಯಾರ್ಥಿಗಳಿಗೆ ಸಂಬಂಧಿಸಿದ್ದಾಗಿದೆ). ಪಟ್ಟಣ ಪ್ರದೇಶದ ಅನುದಾನ ಸಹಿತ ಮತ್ತು ಅನುದಾನ ರಹಿತ ಶಾಲೆಯ ವಿದ್ಯಾರ್ಥಿಗಳು ಗ್ರಾಮೀಣ ಪ್ರದೇಶದ ಸರಕಾರಿ ಶಾಲೆಯ ವಿದ್ಯಾರ್ಥಿಗಳಿಗಿಂತ ಹೆಚ್ಚು ಸಾಮರ್ಥ್ಯವನ್ನು ಹೊಂದಿರುವುದು ಸಂಶೋಧನೆಯಿಂದ ಸ್ಪಷ್ಟವಾಗಿದೆ.

ಕಲಿಕಾ ಕನಿಷ್ಠ ಹಂತಗಳಿಗೆ ಸಂಬಂಧಿಸಿದಂತೆ ಅನೇಕ ಯೋಜನೆಗಳನ್ನು ಕೇಂದ್ರ ಸರಕಾರದ ಮಾನವ ಸಂಪನ್ಮೂಲ ಅಭಿವೃದ್ಧಿ ಇಲಾಖೆಯು ಪ್ರಾಯೋಜಿಸಿದ್ದರೂ, ಅವುಗಳು ಇನ್ನೂ ಪೂರ್ಣಗೊಂಡಿಲ್ಲ. (ಅವುಗಳು ಕೇವಲ ಮುಖ್ಯ ಮಾಹಿತಿಯನ್ನು ನೀಡಿವೆ). ಅವುಗಳಲ್ಲಿ ಕೆಲವುಗಳನ್ನು ಈ ಕೆಳಗೆ ನೀಡಲಾಗಿದೆ. "ಮೈಸೂರು ಕಲಿಕಾ ಕನಿಷ್ಠ ಹಂತಗಳ ಯೋಜನೆ" ಎನ್ನುವ ಸಂಶೋಧನೆಯನ್ನು ೧೯೯೧ರಲ್ಲಿ ಪ್ರಾರಂಭಿಸಿದರು. ಮೂರು ವರ್ಷಗಳ ಈ ಯೋಜನೆ ಮೈಸೂರು ಜಿಲ್ಲೆಯ ಸುಮಾರು ೫೦೦ ಪ್ರಾಥಮಿಕ ಶಾಲೆಗಳನ್ನು ಒಳಗೊಂಡಿತ್ತು. ವಿಶೇಷವಾಗಿ ಹಿಂದುಳಿದ ಪ್ರದೇಶಗಳ ಪ್ರಾಥಮಿಕ ಶಾಲೆಗಳನ್ನು ಅದರಲ್ಲೂ ಕೇವಲ ಕನ್ನಡ ಮಾಧ್ಯಮ ಶಾಲೆಗಳನ್ನು ಆಯ್ಕೆ ಮಾಡಿಕೊಳ್ಳಲಾಗಿತ್ತು. ಯೋಜನೆಯ ಮುಖ್ಯ ಉದ್ದೇಶ ಪ್ರಾಥಮಿಕ ಶಾಲೆಯ ಎಲ್ಲಾ ಮಕ್ಕಳು ಕಲಿಕಾ ಕನಿಷ್ಠ ಹಂತವನ್ನು ಮುಟ್ಟಿದ್ದಾರೆಯೋ ಅಥವಾ ಇಲ್ಲವೋ ಎಂಬುದನ್ನು ದೃಢಪಡಿಸಿಕೊಳ್ಳುವುದಾಗಿತ್ತು. ಆಯ್ಕೆ ಶಾಲೆಗಳ ಶಿಕ್ಷಕರ ಗ್ರಹಿಕೆ ಪ್ರಾಮುಖ್ಯತೆಗಳು ಮತ್ತು ಸಾಮರ್ಥ್ಯಗಳನ್ನು ಪ್ರಾಯೋಗಿಕ ಕಾರ್ಯಕ್ರಮಗಳ ಮೂಲಕ ಉತ್ತಮಪಡಿಸುವ ಗುರಿಯನ್ನು ಯೋಜನೆ ಹೊಂದಿತ್ತು. ಕಲಿಕಾ ಕನಿಷ್ಠ ಹಂತದ ಮೌಲ್ಯಮಾಪನ ಈ ಯೋಜನೆಯ ಅವಿಭಾಜ್ಯ ಅಂಗವಾಗಿತ್ತು.

ಇಂತಹುದೇ ಅಧ್ಯಯನವನ್ನು ಬೆಂಗಳೂರಿನ ಸಾಮಾಜಿಕ ಮತ್ತು ಆರ್ಥಿಕ ಅಧ್ಯಯನ ಸಂಸ್ಥೆಯ ನಾಗರಾಜ್ ಎಂಬುವವರು ೧೯೯೧ರಲ್ಲಿ ಕೈಗೊಂಡರು. ಅಧ್ಯಯನಕ್ಕಾಗಿ ತುಮಕೂರು ಜಿಲ್ಲೆಯ ಪ್ರಾಥಮಿಕ ಶಾಲೆಗಳನ್ನು ಆಯ್ದುಕೊಳ್ಳಲಾಗಿತ್ತು. ಮುದ್ರಿತ ತರಬೇತಿ ವಸ್ತುವಿನ ಮೂಲಕ ಶಿಕ್ಷಕರನ್ನು ತರಬೇತಿಗೊಳಿಸುವ ಮುಖ್ಯ ಅಂಶವನ್ನು ಯೋಜನೆಯು ಒಳಗೊಂಡಿತ್ತು.

ಪೂನಾದ ಭಾರತೀಯ ಶಿಕ್ಷಣ ಸಂಸ್ಥೆಯ ಸೋಮಾನ್ ಮತ್ತು ಕರಂಡಿಕಲ್ ಎಂಬುವವರು ೧೯೯೧ರಲ್ಲಿ 'ಕನಿಷ್ಠ ಕಲಿಕಾ ಹಂತದ ಯೋಜನೆ ' ಎನ್ನುವ ಶೀರ್ಷಿಕೆಯುಳ್ಳ ಅಧ್ಯಯನವನ್ನು ಪ್ರಾರಂಭಿಸಿದರು. ಮಧ್ಯ ಪ್ರದೇಶದ ಮೂಲಕ ಪ್ರಾಥಮಿಕ ಶಾಲಾ ವಿದ್ಯಾರ್ಥಿಗಳಲ್ಲಿ ಕನಿಷ್ಠ ಕಲಿಕೆಯನ್ನು ಅಭಿವೃದ್ಧಿ ಪಡಿಸುವುದು ಯೋಜನೆಯ ಉದ್ದೇಶವಾಗಿದ್ದರು ಸಹ ಅಧ್ಯಯನದ ಮಧ್ಯಾಂತರ ವರದಿಯು ಕೇವಲ ಮುಖ್ಯ ವಿಷಯಗಳ ಮಾಹಿತಿ ಸಮೀಕ್ಷೆಯಂತೆ ತೋರುತ್ತದೆ. ಅಧ್ಯಯನದ ಸಮೀಕ್ಷೆಯಲ್ಲಿ ೧೯ ಶಾಲೆಗಳಲ್ಲಿ ಮೂರನೇ ತರಗತಿಯಲ್ಲಿ ಕಲಿಯುತ್ತಿರುವ ೪೪೨ ವಿದ್ಯಾರ್ಥಿಗಳ ಗಣಿತ ಸಾಮರ್ಥ್ಯವನ್ನು ಪರೀಕ್ಷಿಸಲಾಯಿತು. ಒಂದು ವಾರ ಸಮಯದಲ್ಲಿ ೩೫ ನಿಮಿಷಗಳ ಪರೀಕ್ಷಾ ಅವಧಿ ಹೊಂದಿದ್ದ ಮೌಖಿಕ ಮತ್ತು ಲಿಖಿತ ಪರೀಕ್ಷೆಗಳಿಗೆ ವಿದ್ಯಾರ್ಥಿಗಳನ್ನು ಒಳಪಡಿಸಲಾಯಿತು. ಗಣಿತ ವಿಷಯಕ್ಕೆ ಸಂಬಂಧಿಸಿದ ಸಾಮರ್ಥ್ಯಗಳಾದ ಕೂಡುವಿಕೆ, ಕಳೆಯುವಿಕೆ, ಅಂಕೆ ಸಂಖ್ಯೆಗಳ ಗುರುತು ಹಚ್ಚುವುದು, ಗುಣಾಕಾರ, ಭಾಗಾಕಾರ, ಉದ್ದ, ಭಾರ, ಘನಗಳ ಅಳತೆ, ಹಣದ ಲೆಕ್ಕ ಮತ್ತು ರೇಖಾಗಣಿತದ ಆಕೃತಿಗಳ ಪರಿಚಯ ಮತ್ತು ಕ್ಷೇತ್ರಫಲ

ಮುಂತಾದವುಗಳನ್ನು ಪರೀಕ್ಷಿಸುವುದಾಗಿತ್ತು. ಪ್ರತಿ ಸಾಮರ್ಥ್ಯದ ಮೇಲೆ ೨ ಪ್ರಶ್ನೆಗಳನ್ನು ಅಳವಡಿಸಲಾಗಿತ್ತು. ೪೪೨ ವಿದ್ಯಾರ್ಥಿಗಳಲ್ಲಿ ೩೭೧ ವಿದ್ಯಾರ್ಥಿಗಳು ಮಾತ್ರ ಪರೀಕ್ಷೆಗೆ ಹಾಜರಾದರು. ಶೇಕಡಾ ೮೦ರ ಸಾಮರ್ಥ್ಯ ಗಳಿಕೆಯನ್ನು ಅಧ್ಯಯನಕಾರರು ನಿರೀಕ್ಷಿಸಿದ್ದರು. ಗೋಚರಿಸಿದ ಕೆಲವು ಮುಖ್ಯ ಸಂಗತಿಗಳು ಈ ಕೆಳಗಿನಂತಿವೆ.

೧. ೩೭೧ ವಿದ್ಯಾರ್ಥಿಗಳಲ್ಲಿ ಕೇವಲ ಒಬ್ಬ ವಿದ್ಯಾರ್ಥಿ ಮಾತ್ರ ಶೇಕಡಾ ೧೦೦ ಸಾಮರ್ಥ್ಯ ಪಡೆದಿದ್ದನು.

೨. ಇಬ್ಬರು ವಿದ್ಯಾರ್ಥಿಗಳು ೧೦ಕ್ಕಿಂತ ಕಡಿಮೆ ಮೌಲ್ಯದ ಸಂಖ್ಯೆಗಳನ್ನು ಗುರುತಿಸಲು ವಿಫಲಗೊಂಡಿದ್ದರು.

೩. ಶೇಕಡಾ ೨೦-೫ರಷ್ಟು ವಿದ್ಯಾರ್ಥಿಗಳು ಏಕ ಸ್ಥಾನ ಸಂಖ್ಯೆಗಳನ್ನು ಸಂಕಲನ ಅಥವಾ ವ್ಯವಕಲನ ಮಾಡುವಲ್ಲಿ ವಿಫಲರಾಗಿದ್ದರು.

೪. ಶೇಕಡಾ ೧೫ ರಷ್ಟು ವಿದ್ಯಾರ್ಥಿಗಳು ಮಾತ್ರ ಶಬ್ದ ರೂಪದಲ್ಲಿರುವ ಸಮಸ್ಯೆಗಳನ್ನು ಬಿಡಿಸಿದ್ದರು.

೫. ಕೇವಲ ಶೇ. ೪.೫ ರಷ್ಟು ವಿದ್ಯಾರ್ಥಿಗಳು ಮಾತ್ರ ಕಳೆದ ತರಗತಿಗಾಗಿ ಇರುವ ಸಾಮರ್ಥ್ಯಗಳನ್ನು ಹೊಂದಿದ್ದರು.

ಭೂಪಾಲದ ಸಂಸ್ಕಾರ ಶಿಕ್ಷಾ ಸಮಿತಿಯ ತ್ರಿಪಾಠಿ ಎನ್ನುವವರು 'ಪ್ರಾಥಮಿಕ ಮಟ್ಟದ ಕಲಿಕಾ ಕನಿಷ್ಠ ಹಂತಗಳು ಯೋಜನೆ-೨ ಎಂಬ ತಲೆಬರಹ ಹೊಂದಿದ ಯೋಜನೆಯನ್ನು ೧೯೯೧ರಲ್ಲಿ ಕೈಗೊಂಡರು. ಅಧ್ಯಯನದ ಅಂಗವಾಗಿ ಎರಡನೇ ತರಗತಿ ವಿದ್ಯಾರ್ಥಿಗಳ ಗಣಿತ ಪರಿಸರ ಅಧ್ಯಯನ ಮತ್ತು ಹಿಂದಿ ವಿಷಯಗಳಿಗೆ ಸಾಮರ್ಥ್ಯ ಗಳಿಕೆಯನ್ನು ಪರೀಕ್ಷಿಸಲಾಯಿತು. ಪರೀಕ್ಷೆಗಾಗಿ ಸಿದ್ಧಪಡಿಸಿದ ಪ್ರಶ್ನೆಪತ್ರಿಕೆಯನ್ನು ಕೇವಲ ಸೀಮಿತವಾಗಿ ಬಳಸಲಾಯಿತು. ಪರೀಕ್ಷೆಯ ಫಲಿತಾಂಶವನ್ನು ಪ್ರಸ್ತುತಪಡಿಸಲಿಲ್ಲ. ಆದರೆ ಅಧ್ಯಯನಕಾರರು ತಮ್ಮ ಮಧ್ಯಾಂತರ ವರದಿಯಲ್ಲಿ ಹೇಳಿರುವಂತೆ "ಮೂಲ ಶಿಕ್ಷಣ ಸಂಸ್ಥೆಯ ವಿದ್ಯಾರ್ಥಿಗಳು ತರಬೇತಿಗಾಗಿ ಉಪಯೋಗಿಸುವ (DIET Students Practiceing School) ಶಾಲೆಗಳ ವಿದ್ಯಾರ್ಥಿಗಳ ಸಾಧನೆ ಇತರೆ ನಗರ ಅಥವಾ ಗ್ರಾಮೀಣ ಶಾಲೆಯ ವಿದ್ಯಾರ್ಥಿಗಳಿಗಿಂತ ಶ್ರೇಷ್ಠ ವಾಗಿತ್ತು.

ಮಧ್ಯಪ್ರದೇಶದ ಇಂದೋರಿನ ರಾಜುಗುರು ಎಂಬುವರು ೧೯೯೧ರಲ್ಲಿ "ಪ್ರಾಥಮಿಕ ಮಟ್ಟದ ಕಲಿಕಾ ಕನಿಷ್ಠ ಹಂತಗಳು ಯೋಜನೆ-I" ಎಂಬ ಶಿರೋನಾಮೆಯಡಿಯಲ್ಲಿ ಅಧ್ಯಯನವನ್ನು ಕೈಗೊಂಡರು. ಒಂದನೇ ತರಗತಿಯ

ವಿದ್ಯಾರ್ಥಿಗಳು ಕನಿಷ್ಠ ಕಲಿಕಾ ಹಂತಗಳ (MLL) ದಾಖಲೆಯ ಪ್ರಕಾರ ಹೊಂದಬೇಕಾದ ಸಾಮರ್ಥ್ಯಗಳನ್ನು ಅಭಿವೃದ್ಧಿ ಪಡಿಸುವುದು ಅಧ್ಯಯನದ ಮುಖ್ಯ ಉದ್ದೇಶವಾಗಿತ್ತು. ಅಧ್ಯಯನದ ವಿವರಗಳು ಲಭ್ಯವಿಲ್ಲ.

ಪೂನಾದ 'ಕಲಿಕಾ ಸಂಪನ್ಮೂಲಗಳ ಕೇಂದ್ರ'ದ (Centre for learning resources) ಕುರಿಯನ್ ಎನ್ನುವವರು 'ಕನಿಷ್ಠ ಕಲಿಕಾ ಹಂತಗಳ (MLL)' ಮೇಲೆ 'ಪೂನಾ ನಗರ ಪಾಲಿಕೆ ಕಲಿಕಾ ಕನಿಷ್ಠ ಹಂತಗಳ ಯೋಜನೆ' ಎಂಬ ತಲೆಬರಹದಡಿಯಲ್ಲಿ, ಪೂನಾ ನಗರಪಾಲಿಕೆ ವ್ಯಾಪ್ತಿಯ ಶಾಲೆಗಳನ್ನು ಅಧ್ಯಯನಕ್ಕೆ ಒಳಪಡಿಸಿದರು. ಯೋಜನೆಯು ಪೂನ ನಗರಪಾಲಿಕೆಯ ೧೦ ಪೌಢಶಾಲೆಗಳ ಮತ್ತು ಇತರೆ ೫ ಶಾಲೆಗಳನ್ನು ಒಳಗೊಂಡಿತ್ತು. ಶಿಕ್ಷಕರ ಅಭಿಪ್ರಾಯ ಗ್ರಹಿಕೆಯನ್ವಯ ೪ ಉತ್ತಮ ೮ ಮಧ್ಯಮ ಮತ್ತು ೮ ಕನಿಷ್ಠತಮ ಮಟ್ಟದ ಸಾಧನೆ ತೋರಿದ ವಿದ್ಯಾರ್ಥಿಗಳನ್ನು ಪ್ರತಿ ಶಾಲೆಯಿಂದ ಆಯ್ದುಕೊಳ್ಳಲಾಯಿತು. ಕನಿಷ್ಠ ಕಲಿಕಾ ಸಾಮರ್ಥ್ಯಗಳನ್ನು ಆಧರಿಸಿ ಭಾಷೆ ಮತ್ತು ಗಣಿತ ವಿಷಯಗಳ ಪ್ರಶ್ನೆ ಪತ್ರಿಕೆಯನ್ನು ತಯಾರಿಸಲಾಯಿತು. ಪರೀಕ್ಷೆ ಮೌಖಿಕ ಮತ್ತು ಲಿಖಿತ ನಮೂನೆಗಳೆರಡನ್ನು ಒಳಗೊಂಡಿತ್ತು. ಯೋಜನೆಯಿಂದ ಹೊರತಾದ ೩ ಪೂನಾ ಮಹಾನಗರ ಪಾಲಿಕೆಯ ಶಾಲೆಗಳಲ್ಲಿ ಪ್ರಶ್ನೆ ಪತ್ರಿಕೆಗಳನ್ನು ಕ್ಷೇತ್ರ-ಪರೀಕ್ಷೆಗೆ ಒಳಪಡಿಸಲಾಯಿತು. ಪ್ರತಿ ಸಾಮರ್ಥ್ಯ ಪರೀಕ್ಷೆಗೆಂದು ೫ ಪ್ರಶ್ನೆಗಳನ್ನು ಅಳವಡಿಸಲಾಗಿತ್ತು. ಗಣಿತ ವಿಷಯದ ಪ್ರಶ್ನೆ ಪತ್ರಿಕೆ ತುಂಬ ವಿಸ್ತೃತವಾಗಿದ್ದು, ಪ್ರತಿ ಸಾಮರ್ಥ್ಯಕ್ಕೆ ಸಂಬಂಧಿಸಿದಂತೆ ೪ ಪ್ರಶ್ನೆಗಳನ್ನು ಅಳವಡಿಸಲಾಗಿತ್ತು.

ನೈಪುಣ್ಯತೆ ಸಾಧನೆಯನ್ನು ಗಣಿತ ವಿಷಯದಲ್ಲಿ ಶೇ. ೭೫ಕ್ಕೆ ಮತ್ತು ಭಾಷಾ ವಿಷಯದಲ್ಲಿ ಶೇ. ೮೦ ಎಂದು ನಿಗದಿಗೊಳಿಸಲಾಗಿತ್ತು. ಪರೀಕ್ಷೆಯ ಫಲಿತಾಂಶಗಳು, ಲಿಖಿತ ಪರೀಕ್ಷೆಯಲ್ಲಿ ವಿದ್ಯಾರ್ಥಿಗಳ ಸಾಧನೆಯನ್ನು ಕಳಪೆ ಎಂದು ಮೌಖಿಕ ಪರೀಕ್ಷೆಯಲ್ಲಿನ ಸಾಧನೆ ಲಿಖಿತ ಪರೀಕ್ಷೆಗಿಂತ ಬಹಳ ಉತ್ತಮ ಎಂಬುದನ್ನು ಬಿಂಬಿಸಿದುವು. ಗಣಿತ ವಿಷಯದಲ್ಲಿ ಶೇ. ೮೦ ರಷ್ಟು ವಿದ್ಯಾರ್ಥಿಗಳು ೧೨ರಲ್ಲಿ ೭ ಮೌಖಿಕ ಪರೀಕ್ಷಾ ಪ್ರಶ್ನೆಗಳನ್ನು ಉತ್ತರಿಸಿದ್ದರು. ಗಣಿತ ಪಠ್ಯಪುಸ್ತಕದಲ್ಲಿ ಆರೋಹಣ ಮತ್ತು ಅವರೋಹಣ ರೀತಿಯಲ್ಲಿ ಸಂಖ್ಯೆಗಳನ್ನು ಬರೆಯುವ ಸಾಮರ್ಥ್ಯಕ್ಕೆ ಸಂಬಂಧಿಸಿದಂತೆ ಯಾವ ಪ್ರಸ್ತಾಪವೂ ಇರದ ಕಾರಣ ವಿದ್ಯಾರ್ಥಿಗಳ ಪರೀಕ್ಷಾ ಸಾಧನೆ ಈ ಸಾಮರ್ಥ್ಯಕ್ಕೆ ಸಂಬಂಧಿಸಿದಂತೆ ಕಳಪೆಯಾಗಿತ್ತು.

ಅರ್ಧದಷ್ಟು ವಿದ್ಯಾರ್ಥಿಗಳು ಸರಳ ಸಂಕಲನ ಮತ್ತು ವ್ಯವಕಲನದ ಸಮಸ್ಯೆಗಳನ್ನು ಬಗೆಹರಿಸುವುದರಲ್ಲಿ ವಿಫಲರಾಗಿದ್ದರು. ಉತ್ತಮವೆಂದು ಗುರುತಿಸಿದ ವಿದ್ಯಾರ್ಥಿಗಳು ಶೇ ೮೦ಕ್ಕೂ ಹೆಚ್ಚು ಜನ ೧೭ ಲಿಖಿತ ಪ್ರಶ್ನೆಗಳಲ್ಲಿ ೧೩ ಪ್ರಶ್ನೆಗಳ ನೈಪುಣ್ಯತೆಯನ್ನು ಪ್ರದರ್ಶಿಸಿದರು. ಆದರೆ ಕನಿಷ್ಠತಮ ಎಂದು ಗುರುತಿಸಿದ ಯಾವುದೇ ವಿದ್ಯಾರ್ಥಿಯು

ಯಾವುದೇ ವಿಷಯದಲ್ಲಿ ನೈಪುಣ್ಯತೆಯನ್ನು ಪ್ರದರ್ಶಿಸಲಿಲ್ಲ. ಯೋಜನೆಯ ಅಡಿಯಲ್ಲಿನ ಯಾವುದೇ ಶಾಲೆಯ ಶೇಕಡಾ ೫೦ರಷ್ಟು ವಿದ್ಯಾರ್ಥಿಗಳು ಗಣಿತ ವಿಷಯದಲ್ಲಿನ ಎಲ್ಲಾ ಸಾಮರ್ಥ್ಯಗಳಲ್ಲಿ ನೈಪುಣ್ಯತೆ ಸಾಧಿಸಿರಲಿಲ್ಲ. ಅತಿ ಉತ್ತಮ ಸಾಧನೆ ತೋರಿದ ಶಾಲೆಗಳ ಶೇ. ೨೭ರಷ್ಟು ವಿದ್ಯಾರ್ಥಿಗಳು ಮಾತ್ರ ಎಲ್ಲಾ ಸಾಮರ್ಥ್ಯಗಳಲ್ಲಿ ನೈಪುಣ್ಯತೆ ಪಡೆದಿದ್ದರು. ಇದು ನಿರೀಕ್ಷಿತ ಮಟ್ಟವಾದ ಶೇ. ೮೦ಕ್ಕಿಂತಲೂ ಬಹಳ ಕಡಿಮೆಯಾಗಿತ್ತು.

೧೯೯೨ರಲ್ಲಿ ಶೈಲಜಾ ವಿ. ಶಾನ್‌ಬಾಗ್ ಎನ್ನುವವರು "ಪ್ರಾಥಮಿಕ ಶಿಕ್ಷಣದ ಅಂತಿಮ ಮಟ್ಟದ ಗಣಿತ ವಿಷಯ ದಲ್ಲಿನ ಕನಿಷ್ಠ ಕಲಿಕಾ ಹಂತಗಳ ಸಾಧಿಸುವಿಕೆ-ಒಂದು ವಿಮರ್ಶಾತ್ಮಕ ಅಧ್ಯಯನ" ಎಂಬ ವಿಷಯದ ಮೇಲೆ ಅಧ್ಯಯನ ನಡೆಸಿದರು.

ಒಟ್ಟು ಸಾಮರ್ಥ್ಯಗಳಲ್ಲಿ ಶೇ. ೮೦ ಸಾಮರ್ಥ್ಯಗಳನ್ನು ಶೇ. ೮೦ ವಿದ್ಯಾರ್ಥಿಗಳು ಸಾಧಿಸುವುದನ್ನು ನಿರೀಕ್ಷಿತ ನೈಪುಣ್ಯತಾ ಮಟ್ಟ ಎಂದು ಗುರುತಿಸಲಾಗಿತ್ತು. ಯಾವುದೇ ನಮೂನೆಯ ಶಾಲೆಯ ವಿದ್ಯಾರ್ಥಿಯೊಬ್ಬ ನಿಗದಿತ ಸಾಮರ್ಥ್ಯಗಳನ್ನು ಶೇ. ೮೦ನ್ನು ಹೊಂದದೇ ತನ್ನ ಪ್ರಾಥಮಿಕ ಶಿಕ್ಷಣವನ್ನು ಮುಗಿಸುವವನಾಗಿದ್ದ ಎಂಬುದು ಈ ಅಧ್ಯಯನದಿಂದ ತಿಳಿದುಬಂದ ವಿಷಯವಾಗಿತ್ತು.

ಕೆಲವು ವಿದ್ಯಾರ್ಥಿಗಳು ಗಣಿತ ವಿಷಯದಲ್ಲಿನ ಶೇ. ೮೦ರಷ್ಟು ಸಾಮರ್ಥ್ಯಗಳನ್ನು ತರಗತಿ ಮಾಡಿಕೊಳ್ಳುವ ನಿಟ್ಟಿನಲ್ಲಿ ಸಿ.ಬಿ.ಎಸ್.ಈ. ಪಠ್ಯಕ್ರಮ ಯಶಸ್ವಿಯಾಗಿತ್ತು. ಬೋಧನಾ ವೇಳೆಯನ್ನು ಹೆಚ್ಚಿಸುವುದರ ಮೂಲಕ ಈ ಪಠ್ಯಕ್ರಮ ಇನ್ನು ಹಲವರು ವಿದ್ಯಾರ್ಥಿಗಳು ಶೇ. ೮೦ರಷ್ಟು ಗಣಿತ ವಿಷಯದ ಸಾಮರ್ಥ್ಯಗಳನ್ನು ಹೊಂದಬಲ್ಲವರಾಗಿದ್ದರು. ರಾಜ್ಯ ಪಠ್ಯಕ್ರಮ ಪಾಲಿಸುವ ಶಾಲೆಯ ಯಾವುದೇ ಒಬ್ಬ ವಿದ್ಯಾರ್ಥಿಯೂ ಸಹ ಗಣಿತ ವಿಷಯದಲ್ಲಿನ ಶೇ. ೮೦ ರಷ್ಟು ಸಾಮರ್ಥ್ಯಗಳನ್ನು ಹೊಂದುತ್ತಿರಲಿಲ್ಲ. ಗ್ರಾಮೀಣ ಶಾಲೆಗಳ ಸ್ಥಿತಿಯಂತು ಇನ್ನು ಶೋಚನೀಯವಾಗಿತ್ತು, ಇಲ್ಲಿನ ಎಲ್ಲಾ ವಿದ್ಯಾರ್ಥಿಗಳು ಕನಿಷ್ಠ ಭಾಗಶಃ ಸಾಮರ್ಥ್ಯಗಳು ಹೊಂದಿದವರಾಗಿರಲಿಲ್ಲ.

ಒಟ್ಟಾರೆ ಗ್ರಾಮೀಣ ಪ್ರದೇಶದಲ್ಲಿ ಅಂತಿಮ ಮಟ್ಟದ ಪ್ರಾಥಮಿಕ ಶಿಕ್ಷಣ ಮುಗಿಸುವ ಯಾವುದೇ ವಿದ್ಯಾರ್ಥಿಯು ಯಾವಾಗಲೂ ಗಣಿತ ವಿಷಯದಲ್ಲಿ ಕನಿಷ್ಠ ಕಲಿಕಾ ಹಂತಗಳನ್ನು ಸಾಧಿಸದೇ ಆ ಪ್ರಾಥಮಿಕ ಶಿಕ್ಷಣ ಕೊನೆಗೊಳಿಸುತ್ತಿದ್ದನು.

ರಾಮಕಲ್ಯಾಣಿ ಕೆ.ದಾಸ್ ಎನ್ನುವವರು ೧೯೯೩ರಲ್ಲಿ "ಮೇಲ್ಮಟ್ಟದ ಪ್ರಾಥಮಿಕ ಹಂತದಲ್ಲಿನ ವಿದ್ಯಾರ್ಥಿಗಳ ಅಂತಿಮ ಮಟ್ಟದ ಪ್ರಾಥಮಿಕ ಶಿಕ್ಷಣದ ಗಣಿತ ವಿಷಯದಲ್ಲಿನ ಕನಿಷ್ಠ ಕಲಿಕಾ ಹಂತದ ನೈಪುಣ್ಯತೆ" ಎಂಬ

ಶಿರೋನಾಮೆಯುಳ್ಳ ವಿಷಯದ ಮೇಲೆ ಅಧ್ಯಯನ ನಡೆಸಿದರು. ಮೇಲಿನ ಅಧ್ಯಯನಕ್ಕೆ ವ್ಯಾಪ್ತಿಗೆ ಮೈಸೂರು ಮತ್ತು ಸುತ್ತಲಿನ ಪ್ರದೇಶದ ಶಾಲೆಗಳು ಒಳಪಟ್ಟಿದ್ದವು.

**ಅಧ್ಯಯನದ ಉದ್ದೇಶಗಳು ಈ ಕೆಳಗಿನಂತಿದ್ದವು**

೧. ಪ್ರಾಥಮಿಕ ಶಾಲಾ ಶಿಕ್ಷಕರಲ್ಲಿ ಕನಿಷ್ಠ ಕಲಿಕಾ ಹಂತಗಳ ಬಗೆಗೆ ಇರುವ ತಿಳುವಳಿಕೆ ಮತ್ತು ಅದನ್ನು ಸಾಧಿಸುವ ದಿಸೆಯಲ್ಲಿ ಅವರ ಪ್ರಯತ್ನ.

೨. ಪ್ರಾಥಮಿಕ ಶಿಕ್ಷಣದ ಅಂತಿಮ ಹಂತದಲ್ಲಿ ಗಣಿತ ವಿಷಯದಲ್ಲಿನ ಕನಿಷ್ಠ ಕಲಿಕೆಯ ಮೇಲೆ ನೈಪುಣ್ಯತೆಯನ್ನು ೫ ಅಥವಾ ೬ನೇ ತರಗತಿಯ ವಿದ್ಯಾರ್ಥಿಗಳು ಸಾಧಿಸಿದ್ದಾರೋ ಅಥವಾ ಇಲ್ಲವೋ ಎಂಬುದರ ಬಗ್ಗೆ ಅಧ್ಯಯನವನ್ನು ಸಿ.ಬಿ.ಎಸ್.ಇ. ಮತ್ತು ರಾಜ್ಯ ಪಠ್ಯಕ್ರಮ ಅನುಸರಿಸುವ ಎಲ್ಲಾ ವಿದ್ಯಾರ್ಥಿಗಳು ಅಧ್ಯಯನದ ವ್ಯಾಪ್ತಿಗೆ ಬರುತ್ತಾರೆ.

೩. ರಾಜ್ಯ ಪಠ್ಯಕ್ರಮದಲ್ಲಿ ಕಲಿಯುತ್ತಿರುವ ವಿದ್ಯಾರ್ಥಿಗಳ ಕನಿಷ್ಠ ವಿಷಯ ನೈಪುಣ್ಯತೆ ಹಾಗೂ ೧. ಸ್ಥಳ ೨. ಶಾಲಾ ಆಡಳಿತ ೩. ಕಲಿಯುವ ಮಾಧ್ಯಮ ಹಾಗೂ ೪. ಲಿಂಗ ಇವುಗಳ ನಡುವಿನ ಸಂಬಂಧಗಳ ಅಧ್ಯಯನ ಅಂಶಗಳು ಒಳಗೊಂಡಿದ್ದು. ಅಧ್ಯಯನದ ವ್ಯಾಪ್ತಿಗೆ ೪, ೫ ಹಾಗೂ ೬ನೇ ತರಗತಿಯಲ್ಲಿ ಕಲಿಯುತ್ತಿರುವ ಬಾಲಕ ಹಾಗೂ ಬಾಲಕಿಯರು ಬರುತ್ತಾರೆ.

ಶೇ. ೮೦ ಅಥವಾ ಅದಕ್ಕೂ ಹೆಚ್ಚಿನ ವಿದ್ಯಾರ್ಥಿಗಳು ಶೇ. ೮೦ ರಷ್ಟು ನಿಗದಿತ ಕನಿಷ್ಠ ಕಲಿಕೆಯ ಸಾಧನೆ ಅಧ್ಯಯನಕಾರರು ನಿರೀಕ್ಷಿಸಿದ ನೈಪುಣ್ಯತೆಯ ಮಟ್ಟವಾಗಿತ್ತು. ಅಂತಿಮ ಮಟ್ಟದ ಪ್ರಾಥಮಿಕ ಶಿಕ್ಷಣದ ಕನಿಷ್ಠ ಕಲಿಕೆಯ ಮಟ್ಟ ಶೇ. ೦ ರಿಂದ ೬೦ರವರೆಗೆ ಇದ್ದು. ೬ನೇ ತರಗತಿಯವರೆಗೆ ಮೇಲೆ ಹೇಳಿದ ಸರಾಸರಿ ಶೇ. ೦ ಯಿಂದ ಶೇ. ೫೯ ರವರೆಗೆ ಇರುವುದು ಕಂಡುಬಂದಿತು.

## ೨. ೩. ಜಿಲ್ಲಾ ಪ್ರಾಥಮಿಕ ಶಿಕ್ಷಣ ಯೋಜನೆ ಅಡಿಯಲ್ಲಿಯ ಗ್ರಂಥಗಳು ಹಾಗೂ ದಾಖಲೆಗಳು

೧೯೯೬ ಅಕ್ಟೋಬರ್‌ನಲ್ಲಿ ಗ್ರಾಮಶಿಕ್ಷಣ ಸಮಿತಿಯ ಸದಸ್ಯರ ತರಬೇತಿಗಾಗಿ ರಚಿಸಲಾದ ''ನಮ್ಮೂರ ಶಾಲೆ ಹೀಗಿರಲಿ'' ಮತ್ತು ''ನಮ್ಮೂರ ಜನ, ನಮ್ಮೂರ ಶಾಲೆ'' ಎಂಬ ಎರಡು ಕಿರುಹೊತ್ತಿಗೆಗಳು ಸ್ವಯಂ ವಾಚನ ಸಾಮಗ್ರಿಯಾಗಿ ರೂಪುಗೊಂಡಿವೆ. ಸರಳಭಾಷೆಯಲ್ಲಿ ರಚಿಸಲಾಗಿದ್ದು, ಗ್ರಾಮ ಶಿಕ್ಷಣ ಸಮಿತಿಗಳ ರಚನೆ,

ಕಾರ್ಯವ್ಯಾಪ್ತಿ, ಕರ್ತವ್ಯಗಳು ಮತ್ತು ಜವಾಬ್ದಾರಿಗಳು ಹಾಗೂ ಹಣಕಾಸು ನಿರ್ವಹಣೆ ಮುಂತಾದ ವಿಷಯದ ಬಗ್ಗೆ ಉಪಯುಕ್ತ ಮಾಹಿತಿಗಳನ್ನು ಒಳಗೊಂಡಿದೆ.

೧೯೯೭ರಲ್ಲಿ ಪ್ರಕಟಣೆಯಾದ 'ಮಂಥನ' ಸೇವೆನಿರತ ಶಿಕ್ಷಕರ ತರಬೇತಿ-ತರಬೇತಿದಾರರ ಕೈಪಿಡಿಯು ಮಕ್ಕಳು ಕಲಿಯುವ ವಿಧಾನ, ಕಲಿಕೆಯ ಮೂಲ ತತ್ವಗಳು, ಕಲಿಕಾ ಸಾಮಗ್ರಿಗಳು, ಬೋಧನಾ ವಿಧಾನ-ಕಲಿಕಾ ಚಟುವಟಿಕೆಗಳು ಮುಂತಾದ ಉಪಯುಕ್ತ ವಿಷಯಗಳ ಬಗ್ಗೆ ಪೂರಕ ಮಾಹಿತಿಯನ್ನು ಒದಗಿಸುತ್ತಿದೆ.

೧೯೯೮ ಫೆಬ್ರುವರಿಯಲ್ಲಿ ಪ್ರಕಟಣೆಯಾದ 'ಮುಖ್ಯ ಶಿಕ್ಷಕರ ತರಬೇತಿ'- ತರಬೇತಿಯ ಪಠ್ಯವಸ್ತುವು ಜಿಲ್ಲಾ ಪ್ರಾಥಮಿಕ ಶಿಕ್ಷಣ ಯೋಜನೆಯ ಉದ್ದೇಶಗಳ ಹಿನ್ನೆಲೆಯನ್ನು ಇಟ್ಟುಕೊಂಡು, ಔಪಚಾರಿಕ ಪ್ರಾಥಮಿಕ ಶಿಕ್ಷಣದ ಚಟುವಟಿಕೆಗಳನ್ನು ವಿವರಿಸುತ್ತಾ ಸೂಕ್ಷ್ಮ ಯೋಜನೆ ಪರಿಕಲ್ಪನೆಯಿಂದ ಆಯಾ ಗ್ರಾಮದ ಶೈಕ್ಷಣಿಕ ಸಮಸ್ಯೆಗಳನ್ನು ಅರಿಯಲು, ಮಕ್ಕಳು ಶಾಲೆ ಬಿಡುವ ಪರಿಸ್ಥಿತಿ, ಹಾಜರಿ ಕಡಿಮೆ, ಸಾಧನೆ ಮತ್ತು ಮಕ್ಕಳು ಶಾಲೆಯಲ್ಲಿ ಉಳಿಯುವಂತೆ ಮಾಡುವುದು ಮೊದಲಾದ ವಿಷಯಗಳನ್ನು ಅರ್ಥಮಾಡಿಕೊಂಡು ಗ್ರಾಮಶಿಕ್ಷಣ ಸಮಿತಿ ರಚನೆ ಮತ್ತು ಕರ್ತವ್ಯಗಳು, ಜವಾಬ್ದಾರಿಗಳು ಹಾಗೂ ನಿರ್ವಹಣೆಯನ್ನು ಒಳಗೊಂಡ ಸಂಪೂರ್ಣ ಮಾಹಿತಿ, ಹಣಕಾಸು ನಿರ್ವಹಣೆ, ವಾರ್ಷಿಕ ಯೋಜನೆ ಮತ್ತು ಸಂಸ್ಥಾಯೋಜನೆ, ನಾಯಕತ್ವ ಇತ್ಯಾದಿ ವಿಷಯಗಳನ್ನು ಒಳಗೊಂಡಿದೆ.

ಶಿಕ್ಷಣದ ಪ್ರಸ್ತುತ ಸಂದರ್ಭದಲ್ಲಿ ಶಿಕ್ಷಕರು ಹೊಸ ವ್ಯವಸ್ಥೆಗೆ ಹೊಂದಿಕೊಂಡು ಕೆಲಸ ನಿರ್ವಹಿಸಬೇಕಾಗುತ್ತದೆ. ಇಲ್ಲಿ ಮುಖ್ಯೋಪಧ್ಯಾಯರ ಜವಾಬ್ದಾರಿ ಪ್ರಮುಖವಾಗಿರುತ್ತದೆ. ಶಿಕ್ಷಣದ ಗುಣಮಟ್ಟ ಸುಧಾರಣೆಗೆ ಹೊಸ ಹೊಸ ಯೋಜನೆಗಳು ಜಾರಿಗೊಳ್ಳುತ್ತಿದ್ದು, ಅವುಗಳಿಗೆ ತಕ್ಕಂತೆ ಎಲ್ಲ ಶಿಕ್ಷಕರಿಗೂ ಶಾಲಾ ಮಟ್ಟದಲ್ಲಿ ಇವುಗಳ ಯೋಜನೆಗಳನ್ನು ಹೇಗೆ ರೂಪಿಸಬೇಕು, ತರಬೇತಿಯ ಮುಖ್ಯಗುರುಗಳಿಗೆ ಪ್ರಸ್ತುತ ಪಡಿಸಲಾಗಿದೆ.

೧೯೯೮-೯೯ರಲ್ಲಿ ಪ್ರಕಟವಾದ ಡಿ.ಪಿ.ಇ.ಪಿ. ಕರ್ನಾಟಕ ವಾರ್ಷಿಕ ವರದಿಯು ಡಿ.ಪಿ.ಇ.ಪಿ. ಕಾರ್ಯಕ್ರಮವು ಅನುಷ್ಠಾನಗೊಂಡು ಮೊದಲ ಹಂತದ ಜಿಲ್ಲೆಗಳಲ್ಲಿ ೫ ವರ್ಷಗಳು ಎರಡನೇ ಹಂತದ ಜಿಲ್ಲೆಗಳಲ್ಲಿ ೨ ವರ್ಷಗಳೂ ಪೂರ್ಣಗೊಂಡಿವೆ. ಈ ವರದಿಯು ಕಾರ್ಯಕ್ರಮದ ಪ್ರಗತಿ, ಪರಿಶೀಲನೆ ಮತ್ತು ಕೈಗೊಂಡ ಕ್ರಮಗಳ ಬಗ್ಗೆ ಬೆಳಕು ಚೆಲ್ಲಿದೆ.

ಹಿಂದಿನ ವರ್ಷದ ಪ್ರಕ್ರಿಯೆಯ ಅನುಭವದಿಂದ ಮುಂದಿನ ಪ್ರಯತ್ನಗಳಲ್ಲಿ ಒಬ್ಬರಿಗೊಬ್ಬರು ಸಹಕಾರದಿಂದ ಅತ್ಯುತ್ಸಾಹದಿಂದ ಮುಂದುವರಿಯಲು ಸಾಧ್ಯವಾಗಲು ಸಹಕಾರಿಯಾಗಿದೆ.

೨೦೦೦ ಸೆಪ್ಟಂಬರ್‌ನಲ್ಲಿ ಪ್ರಕಟವಾದ 'ಚೈತನ್ಯ' ಶಿಕ್ಷಕರ ಸಾಹಿತ್ಯ ಡಿ.ಪಿ.ಇ.ಪಿ. ಯೋಜನೆಯ ವೃತ್ತಿ ನಿರತ ಶಿಕ್ಷಕರ ತರಬೇತಿಯ ಫಿಲಾಸಫಿ ಕಾರ್ಯವಿಧಾನ ಅತ್ಯಂತ ಪ್ರಸ್ತುತವೆನಿಸಿದೆ. 'ನಲಿ ಕಲಿ' ಯೋಜನೆಯ ಹಲವಾರು ವಿಶಿಷ್ಟ ಅಂಶಗಳು ಪ್ರಾಯಶಃ ಇದೇ ಮೊದಲ ಬಾರಿಗೆ ಗುರುತಿಸಲ್ಪಟ್ಟಿವೆ. ಇವೆರಡೂ ವಿಶಿಷ್ಟ ಯೋಚನಾಧಾರೆಗಳಿಂದ ವಿಪುಲವಾಗಿ ತತ್ವಗಳನ್ನು ಪ್ರಕ್ರಿಯೆಗಳನ್ನು ಅಳವಡಿಸಲಾಗಿದೆ. ಎನ್.ಸಿ.ಇ.ಆರ್.ಟಿಯ ಸಾಫ್ಟ್ ಸಂಚಿಕೆಯ ಅರಿವಿನ ಅಂಶಗಳು ಹಾಗೂ ಪ್ರಾಥಮಿಕ ಶಿಕ್ಷಕರ ತರಬೇತಿಯ ಆದ್ಯತೆಯ ಕ್ಷೇತ್ರಗಳೆಂದು ಗುರುತಿಸಿದ ಅಂಶಗಳನ್ನು ಸಹ ಇದರಲ್ಲಿ ಚಿತ್ರಿಸಲಾಗಿದೆ.

೨೦೦೨ ಆಗಸ್ಟ್‌ರಲ್ಲಿ ಬಿಡುಗಡೆಯಾದ 'ಕೇಳಿ-ನಲಿ' ಅಂತರ್ ಕ್ರಿಯಾತ್ಮಕ ಕಾರ್ಯಕ್ರಮವು ಆಕಾಶವಾಣಿ ಬೆಂಗಳೂರಿನಿಂದ ಬಾನುಲಿ ಪ್ರಸಾರವು ೩, ೪ ಮತ್ತು ೫ನೇ ತರಗತಿಗಳಿಗೆ ಆಯ್ದ ಜಿಲ್ಲೆಗಳಲ್ಲಿ ಕಳೆದ ವರ್ಷ ಕನ್ನಡ, ಪರಿಸರ ಅಧ್ಯಯನ ಹಾಗೂ ಗಣಿತ ವಿಷಯಗಳ ಆಯ್ದ ಪಾಠಗಳನ್ನು ಬಾನುಲಿ ಮೂಲಕ ಪ್ರಸಾರ ಮಾಡಲಾಗಿದ್ದು, ಇದು ಗುಣಾತ್ಮಕ ಕಲಿಕೆಗೆ ಪೂರಕವಾದುದರಿಂದ ರಾಜ್ಯದ ಎಲ್ಲಾ ಜಿಲ್ಲೆಗಳಿಗೂ ಪ್ರಸಾರ ಮಾಡುವ ನಿಲುವನ್ನು ಮಂಡಿಸಿ ಕಾರ್ಯಕ್ರಮ ರೂಪಿಸಲಾಗಿದೆ.

ರೇಡಿಯೋ ಮಾಧ್ಯಮದ ಇತಿಮಿತಿಯನ್ನು ಅರಿತು ಶಿಕ್ಷಣ ತಜ್ಞರು ಶಿಕ್ಷಕರು, ಸಾಹಿತಿಗಳು, ಆಕಾಶವಾಣಿ ನಿರ್ವಾಹಕರು ಒಟ್ಟು ಸೇರಿ ವಿದ್ಯಾರ್ಥಿಗಳಿಗೆ, ಶಿಕ್ಷಕರಿಗೆ, ಪೋಷಕರು ಮತ್ತು ಸಾರ್ವಜನಿಕರು ಕ್ರಿಯಾತ್ಮಕ ಪ್ರತಿಕ್ರಿಯೆ ವ್ಯಕ್ತಪಡಿಸಲು ಪರಿಣಾಮಕಾರಿ ಕಾರ್ಯಕ್ರಮವಾಗಿದೆ.

೨೦೦೨ ಡಿಸೆಂಬರ್‌ನಲ್ಲಿ ಪ್ರಕಟವಾದ 'ಸಂಕಲ್ಪ' ಎನ್ನುವ ಶಾಲಾ ಅಭಿವೃದ್ಧಿ ಮತ್ತು ಮೇಲು ಉಸ್ತುವಾರಿ ಸಮಿತಿ ಸದಸ್ಯರ ತರಬೇತಿ ಸಾಹಿತ್ಯವು ಶಾಲಾ ಶಿಕ್ಷಣದಲ್ಲಿ ಗುಣಾತ್ಮಕ ಬದಲಾವಣೆ ತರಲು ಹಾಗೂ ಶಾಲಾ ಆಡಳಿತದಲ್ಲಿ ಸಮುದಾಯದ ಸಕ್ರಿಯ ಪಾತ್ರವನ್ನು ಖಚಿತಪಡಿಸಲು ರಾಜ್ಯದ ಎಲ್ಲಾ ಹಿರಿಯ, ಕಿರಿಯ ಹಾಗೂ ಪ್ರೌಢ ಸರಕಾರಿ ಶಾಲೆಗಳಲ್ಲಿ ಅಭಿವೃದ್ಧಿ ಹಾಗೂ ಮೇಲುಸ್ತುವಾರಿ ಸಮಿತಿಗಳ ರಚನೆಗೆ ಸರ್ಕಾರ ಅನುಮತಿ ನೀಡಿದ ಹಿನ್ನೆಲೆಯಲ್ಲಿ ಸಮಿತಿಯ ಸದಸ್ಯರನ್ನು ಸಮುದಾಯದ ವಿವಿಧ ಸ್ತರಗಳಿಂದ ಆಯ್ದುಕೊಳ್ಳಲಾಗಿದೆ. ಇವರು ಶಾಲೆಯ ಶೈಕ್ಷಣಿಕ ಹಾಗೂ ಆಡಳಿತಾತ್ಮಕ ವಿಷಯಗಳನ್ನು ಗಮನದಲ್ಲಿಟ್ಟುಕೊಂಡು ಶಾಲೆಯ ಹಾಗೂ ತಮ್ಮ ಸಮುದಾಯದ ಸರ್ವತೋಮುಖ ಬೆಳವಣಿಗೆಗೆ ಬೇಕಾದ ಪೂರಕ ಮಾಹಿತಿಯನ್ನು ನೀಡುವಲ್ಲಿ ಈ ಸಂಕಲ್ಪ ತರಬೇತಿ ಸಾಹಿತ್ಯ ಸಹಾಯಕ ವಾಗಿದೆ.

## ಅಭಿಮತ ಮತ್ತು ಉಪಸಂಹಾರ

ಶಾಲಾ ಮಟ್ಟದಲ್ಲಿ ಕನಿಷ್ಠ ಕಲಿಕೆಯನ್ನು ಖಚಿತ ಮಾಡಿಕೊಳ್ಳಲು ಸರಕಾರ ಮತ್ತು ಶಿಕ್ಷಣ ತಜ್ಞರು ಅವಸರವನ್ನು ಮಾಡುತ್ತಿರುವಂತೆ ತೋರುತ್ತದೆ. ಕನಿಷ್ಠ ಕಲಿಕೆಯ ಸಾಧನೆ ಶಾಲೆಯಿಂದ ಶಾಲೆಗೆ ಭಿನ್ನವಾಗಿದ್ದು, ಅದು ಅನೇಕ ಕಾರಣಗಳಿಂದ ಪ್ರಭಾವಿತಗೊಂಡಿದೆ. ಕನಿಷ್ಠ ಕಲಿಕಾ ಸಾಮರ್ಥ್ಯಗಳ ಪಟ್ಟಿಗಳಲ್ಲಿ (ರಾಜ್ಯ, ರಾಷ್ಟ್ರೀಯ) ವ್ಯತ್ಯಾಸವಿದೆ ಆದರೆ ಸಂಶೋಧಕರಲ್ಲಿ ಬಹುಮಟ್ಟಿನ ಒಮ್ಮತ ಕಂಡುಬರುತ್ತದೆ. ಕನಿಷ್ಠ ಕಲಿಕೆಗಳ ಪಟ್ಟಿ ಯಾವುದೇ ನಿರ್ದಿಷ್ಟ ಪಠ್ಯಕ್ರಮ ಆಧರಿಸಿದ್ದಿಲ್ಲ. ಸಂಶೋಧಕರಲ್ಲಿ ಕನಿಷ್ಠ ಕಲಿಕೆಯ ಮಟ್ಟಕ್ಕೆ ಸಂಬಂಧಿಸಿದಂತೆ ನೈಪುಣ್ಯತೆಯ ವಿಷಯದಲ್ಲಿ ಮೆದು ಧೋರಣೆಯಿದೆ.

ಒಟ್ಟು ವಿದ್ಯಾರ್ಥಿಗಳಲ್ಲಿ ಶೇ. ೮೦ರಷ್ಟು ವಿದ್ಯಾರ್ಥಿಗಳು ಪಟ್ಟಿ ಮಾಡಿದ ಶೇ. ೮೦ರಷ್ಟು ಕಲಿಕಾ ಸಾಮರ್ಥ್ಯಗಳ ಮಟ್ಟವನ್ನು ನಿರೀಕ್ಷಾ ಮಟ್ಟವಾಗಿ ಇಟ್ಟುಕೊಳ್ಳಲಾಗಿದೆ. ಆದ್ದರಿಂದ ಸಾಮರ್ಥ್ಯ ಪರೀಕ್ಷೆಯು ಅಳತೆಗೋಲು ಆಧಾರ ವಾಗಿದೆಯೋ ಹೊರತು ಮಾದರಿ ಆಧಾರಿತವಾಗಿಲ್ಲ.

ಪ್ರತಿ ಸಾಮರ್ಥ್ಯವನ್ನು ಒಂದಕ್ಕಿಂತ ಹೆಚ್ಚು ಪ್ರಶ್ನೆಗಳಿಂದ ಅಳೆಯಲಾಗಿದೆ. ಶಿಫಾರಸ್ಸು ಮಾಡಿದ ಕಲಿಕೆಯ ಮಟ್ಟ ಮತ್ತು ವಾಸ್ತವಿಕ ಕಲಿಕೆಯ ಮಟ್ಟದಲ್ಲಿ ಗಣನೀಯ ವ್ಯತ್ಯಾಸ ಕಂಡು ಬರುತ್ತದೆ. ಕೆಳ ಹಂತದ ವಿದ್ಯಾರ್ಥಿಗಳ ಕಲಿಕಾ ಮಟ್ಟವನ್ನು ಮೌಖಿಕ ಹಾಗೂ ಲಿಖಿತ ಪರೀಕ್ಷೆಗಳ ಮೂಲಕ ಪರೀಕ್ಷಿಸಿದರೇ ವರ್ಗ ೩, ೪ ಹಾಗೂ ೫ನೇ ತರಗತಿಯ ವಿದ್ಯಾರ್ಥಿಗಳ ಕಲಿಕೆಯನ್ನು ಲಿಖಿತ ಪರೀಕ್ಷೆಗಳ ಮೂಲಕ ಮಾತ್ರ ಮಾಡಲಾಗಿದೆ.

# ಅಧ್ಯಾಯ - ೩

# ಪ್ರಸ್ತುತ ಅಧ್ಯಯನದ ಕಾರ್ಯ ವಿಧಾನ

೩. ೧ ಅಧ್ಯಯನ ವಿಧಾನ

೩. ೨ ಅಧ್ಯಯನದ ಆಯ್ಕೆ ವಿಧಾನ

೩. ೩ ಸಾಮರ್ಥ್ಯಗಳ ಆಯ್ಕೆ

೩. ೪ ಓರೆ ಆಧಾರಿತ ಸಾಧನೆಯ ಪರೀಕ್ಷೆಯನ್ನು ಅಭಿವೃದ್ಧಿಪಡಿಸುವುದು

೩. ೫ ಪೂರ್ವ ಪರೀಕ್ಷೆ

೩. ೬ ಪರೀಕ್ಷೆಯ ಧಾರಾಳತೆಯನ್ನು ಸಿದ್ಧಪಡಿಸಿದ ವಿಧಾನ

೩. ೭ ಪರೀಕ್ಷಾ ವಿಷಯದ ಮೇಲಿನ ಮೌಲ್ಯ

೩. ೮ ಮಾಹಿತಿ ಸಂಗ್ರಹಣಾ ವಿಧಾನ

೩. ೯ ಅಂಕಗಳ ವರ್ಗೀಕರಣ

೩. ೧೦. ಮಾಹಿತಿ ವಿಶ್ಲೇಷಣಾ ತಂತ್ರವಿಧಾನ

# ಪ್ರಸ್ತುತ ಅಧ್ಯಯನದ ಕಾರ್ಯವಿಧಾನ

ಈ ಅಧ್ಯಯನದಲ್ಲಿ ಕ್ರಮಬದ್ಧವಾದ ಕಾರ್ಯವಿಧಾನವನ್ನು ಅನುಸರಿಸಲಾಗಿದೆ. ಒರೆ ಪೂರ್ವಾಧರಿತ ಲಿಖಿತ ಪರೀಕ್ಷೆಯನ್ನು ಅಭಿವೃದ್ಧಿ ಪಡಿಸುವುದು, ಪೂರ್ವ ಪರೀಕ್ಷಾ (Pilot Survey) ಅಧ್ಯಯನ ಹಾಗೂ ಮಾಹಿತಿ ಸಂಗ್ರಹಣಾ ಕಾರ್ಯವಿಧಾನವನ್ನು ಸಾದರಪಡಿಸಲಾಗಿದೆ.

## ೩. ೧. ಅಧ್ಯಯನ ವಿಧಾನ

ಅಧ್ಯಯನದ ಮೂಲ ಉದ್ದೇಶವಾದ ನಾಲ್ಕನೇ ತರಗತಿಯಲ್ಲಿ ಓದುತ್ತಿರುವ ಮಕ್ಕಳಿಗೆ ಪರಿಸರ ಅಧ್ಯಯನ (ವಿಜ್ಞಾನ) ವಿಷಯದ ಮೇಲೆ ಮೌಲ್ಯಾಧಾರಿತ ಲಿಖಿತ ಪರೀಕ್ಷೆಯನ್ನು ನಡೆಸುವುದು. ಅದರಲ್ಲಿ ಅಳವಡಿಸಿದ ಸಾಮರ್ಥ್ಯಗಳ ಸಾಧನೆಯನ್ನು ಗೊತ್ತುಮಾಡುವುದಾಗಿದೆ. ಈ ವಿಧಾನವು ಸಾಮರ್ಥ್ಯಗಳ ವ್ಯತ್ಯಾಸಗಳನ್ನು ಅಳತೆ ಮಾಡಲು ಮುಖ್ಯವಾದ ಸಾಧನವಾಗಿದ್ದು, ಇದು ಪರಿವೀಕ್ಷಣ ವಿಧಾನದ ಮುಖ್ಯಾಂಶವಾಗಿದೆ. ಇದನ್ನು ನಂತರ ವೈಜ್ಞಾನಿಕ ವಿಧಾನವೆಂದು ಸಾದರಪಡಿಸಿದ ಸಂದರ್ಭ ಹಾಗೂ ಸ್ಥಿತಿಗತಿಗೆ ಅನುಗುಣವಾಗಿ ಕರೆಯಲಾಯಿತು. ೧೯೭೭ರಲ್ಲಿ ಬೆಸ್ಟ್ ಎನ್ನುವವರು ನಾಮದೇಯ ವಿಧಾನವನ್ನು ಈ ರೀತಿ ಹೇಳುತ್ತಾರೆ. "ನಿರ್ಬಂಧನೆ ಮತ್ತು ಸಂಬಂಧಗಳು ಪ್ರಸ್ತುತ ಇರುವುದು ಅವುಗಳ ಪಾಲನೆ, ದೃಷ್ಟಿಕೋನ ಮತ್ತು ಅವುಗಳ ಬಗ್ಗೆ ಇರುವ ಅಭಿಪ್ರಾಯ ಅವುಗಳಿಂದಾದ ಪರಿಣಾಮಗಳು ಅಥವ ಅಭಿವೃದ್ಧಿಯನ್ನು ತಿಳಿಸುತ್ತದೆ".

ಅಧ್ಯಯನ ವಿಧಾನವನ್ನು ಅಧ್ಯಾಯ ೧ರಲ್ಲಿ ತಿಳಿಸಿದಂತೆ ಶಿಕ್ಷಕರಲ್ಲಿರುವ ನಿರ್ದಿಷ್ಟವಾದ ವ್ಯತ್ಯಾಸಗಳನ್ನು ವಸ್ತುನಿಷ್ಠ ಪರೀಕ್ಷೆಗೆ ಅಳವಡಿಸಿದ ವಿವಿಧ ಸಾಮರ್ಥ್ಯಗಳಿಂದ ಸಾದರಪಡಿಸಲಾಗಿದೆ.

## ೩. ೨. ಅಧ್ಯಯನದ ಆಯ್ಕೆ ವಿಧಾನ

ಒಂದನೇ ಅಧ್ಯಾಯದಲ್ಲಿ ತಿಳಿಸಿರುವಂತೆ ಸ್ವತಂತ್ರ ಚರಾಂಕಗಳು (Indipendent Variables) ಲಿಂಗ, ವಾಸಸ್ಥಳ ಹಾಗೂ ಸಂಸ್ಥೆಗಳನ್ನು ತೆಗೆದುಕೊಂಡು ಕನಿಷ್ಠ ಕಲಿಕಾ ಹಂತಗಳ ಸಾಮರ್ಥ್ಯಗಳನ್ನು ಪರಿಸರ ಅಧ್ಯಯನ(ವಿಜ್ಞಾನ)

**ಚಿತ್ರ ೧ ಚರಾಂಕಗಳ ಆಧಾರದ ಮೇಲೆ ವಿದ್ಯಾರ್ಥಿಗಳ ವರ್ಗೀಕರಣ**




**ಚಿತ್ರ ೨ ಚರಾಂಕಗಳ ಆಧಾರದ ಮೇಲೆ ಶಿಕ್ಷಕರ ವರ್ಗೀಕರಣ**



ವಿಷಯದಲ್ಲಿ ಅಳವಡಿಸಲಾಗಿದ್ದು, ನಾಲ್ಕನೇ ತರಗತಿಯ ಮಕ್ಕಳ ಮೇಲೆ ಸಾದರಪಡಿಸುವುದು. ಈ ತರಗತಿಯ ಮಕ್ಕಳ ಆಯ್ಕೆಗಾಗಿ ವ್ಯವಸ್ಥಿತವಾದ ಆಯ್ಕೆ ವಿಧಾನವನ್ನು ಬಳಸಲಾಗಿದೆ. (Stratified random sampling) ಸ್ವತಂತ್ರ ಚರಾಂಕಗಳನ್ನು (Indipendent Variables) ದೃಷ್ಟಿಯಲ್ಲಿಟ್ಟುಕೊಂಡು ಆಯ್ಕೆ ವಿಧಾನವು ನಾಲ್ಕನೇ ತರಗತಿಯ ಮಕ್ಕಳನ್ನು ವಿವಿಧ ಉಪಗುಂಪುಗಳಾಗಿ ವಿಂಗಡಿಸಿ ಜಿಲ್ಲೆಯ ಆಯ್ದ ಶಾಲೆಗಳಿಂದ ಆಯ್ಕೆ ಮಾಡಲಾಗಿದೆ.

ಪ್ರಸ್ತುತ ಅಧ್ಯಯನದಲ್ಲಿ ನಾಲ್ಕನೇ ತರಗತಿಯಲ್ಲಿ ಓದುತ್ತಿರುವ ೪,೦೦೦ ಬೇಡ ಸಮುದಾಯದ ಮಕ್ಕಳನ್ನು ಮತ್ತು ೨೦೦ ಪ್ರಾಥಮಿಕ ಶಾಲೆಯ ಬೋಧಕ ವರ್ಗವನ್ನು ಬಳ್ಳಾರಿ ಜಿಲ್ಲೆಯ ೮ ತಾಲೂಕುಗಳಿಂದ ಆಯ್ದುಕೊಳ್ಳಲಾಗಿದೆ. ಶಾಲಾವಾರು ಆಯ್ಕೆ ವಿಧಾನವು ಈ ಕೆಳಗಿನಂತಿದೆ.

### ೩. ೩. ಸಾಮರ್ಥ್ಯಗಳ ಆಯ್ಕೆ

ಬೇರೆ ಬೇರೆ ತರಗತಿಗಳಲ್ಲಿ ಓದುತ್ತಿರುವ ಮಕ್ಕಳು ಕಲಿಕಾ ಕನಿಷ್ಠ ಹಂತಗಳ ಸಾಮರ್ಥ್ಯಗಳನ್ನು ಈಡೇರಿಸಿದ ವರದಿಗಳನ್ನು "ಕನಿಷ್ಠ ಕಲಿಕಾ ಮುಂದುವರಿಕೆ", "ಕಲಿಕಾ ಕನಿಷ್ಠ ಮಟ್ಟಗಳು" ಹಾಗೂ "ಪ್ರಾಥಮಿಕ ಹಂತದಲ್ಲಿ ವಿದ್ಯಾರ್ಥಿಗಳ ಸಾಧನೆ" ಪ್ರಕಟಿಸಿದೆ. ಪ್ರಸ್ತುತ ಅಧ್ಯಯನವು ನಾಲ್ಕನೇ ತರಗತಿಯ ಪರಿಸರ ಅಧ್ಯಯನ (ವಿಜ್ಞಾನ)ದ ಮೇಲೆ ಕನಿಷ್ಠ ಕಲಿಕಾ ಹಂತಗಳ ಕುರಿತಾಗಿದೆ. ಆದ್ದರಿಂದ ಮೇಲಿನ ವರದಿಗಳ ಪಟ್ಟಿಗಳನ್ನು ಪರಾಮರ್ಶಿಸಲಾಗಿದೆ. ಪ್ರತಿ ಹಂತದಲ್ಲಿ ಕೆಲವು ಸಾಮರ್ಥ್ಯಗಳು ಒಂದೇಯಾಗಿರುವುದಿಲ್ಲ. ನಾಲ್ಕನೇ ತರಗತಿಯ ಪರಿಸರ ಅಧ್ಯಯನ (ವಿಜ್ಞಾನ)ಕ್ಕೆ ಅನ್ವಯಿಸುವಂತೆ ಒಟ್ಟು ೨೪ ಸಾಮರ್ಥ್ಯಗಳಿವೆ. ಆಯ್ದ ಸಾಮಾನ್ಯ ಸಾಮರ್ಥ್ಯಗಳನ್ನು ಕೋಷ್ಟಕ ೧ರಲ್ಲಿ ಪ್ರಸ್ತುತ ಪಡಿಸಲಾಗಿದೆ.

**೧. ಪರಿಸರ ಅಧ್ಯಯನ (ವಿಜ್ಞಾನ) ನಾಲ್ಕನೇ ತರಗತಿಗೆ ಆಯ್ದ ಸಾಮರ್ಥ್ಯಗಳು :** ನಾಲ್ಕನೇ ತರಗತಿಯ ಪರಿಸರ ಅಧ್ಯಯನ (ವಿಜ್ಞಾನ) ವಿಷಯದಲ್ಲಿ ಒಟ್ಟು ೨೪ ಸಾಮರ್ಥ್ಯಗಳು ಇದ್ದರೂ, ಸಂಶೋಧಕರು ಕೇವಲ ೧೦ ಸಾಮರ್ಥ್ಯಗಳನ್ನು ಆಯ್ದುಕೊಂಡಿದ್ದಾರೆ. ಯಾಕೆಂದರೆ ಕರ್ನಾಟಕ ರಾಜ್ಯದಾದ್ಯಂತ ನಾಲ್ಕನೇ ತರಗತಿಯ ಪರಿಸರ ಅಧ್ಯಯನ (ವಿಜ್ಞಾನ) ವಿಷಯದ ಮೊದಲ ಐದು ಪಾಠಗಳನ್ನು ನವೆಂಬರ್ ೨೦೦೨ ಅಂತ್ಯದಲ್ಲಿ ಮುಗಿಸಲಾಗಿರುತ್ತದೆ. ಈ ಅಂಶವನ್ನು ಗಮನದಲ್ಲಿಟ್ಟುಕೊಂಡು ಕೇವಲ ೧೦ ಸಾಮರ್ಥ್ಯಗಳನ್ನು ಉಪಯೋಗಿಸಿ ಪ್ರಶ್ನೆ ಪತ್ರಿಕೆಯನ್ನು ರೂಪಿಸಲಾಗಿದೆ.

## ೩. ೪. ಓರೆ ಆಧಾರಿತ ಸಾಧನೆಯ ಪರೀಕ್ಷೆಯನ್ನು ಅಭಿವೃದ್ಧಿಪಡಿಸುವುದು

ಈ ಮೊದಲೇ ತಿಳಿಸಿರುವಂತೆ ಪ್ರಸ್ತುತ ಅಧ್ಯಯನವು ೧೦ ಸಾಮರ್ಥ್ಯಗಳನ್ನು ಒಳಗೊಂಡಿದ್ದು, ಈ ಸಾಮರ್ಥ್ಯಗಳನ್ನು ಮೂಲಧಾರವಾಗಿಟ್ಟುಕೊಂಡು ನಾಲ್ಕನೇ ತರಗತಿಯ ಪರಿಸರ ಅಧ್ಯಯನ (ವಿಜ್ಞಾನ)ದ ಮೇಲೆ ಸಾಧನೆಯ ಪರೀಕ್ಷೆಯನ್ನು ಅಭಿವೃದ್ಧಿ ಪಡಿಸಲಾಗಿದೆ. ಪೂರಕ ಗ್ರಂಥಗಳ ಪುನರ್‌ಅವಲೋಕನದ ಪ್ರಕಾರ, ಅಪೇಕ್ಷಿಸಿದ ಸಾಧನೆಯ ಮಟ್ಟವು ಬೇರೆ ಬೇರೆ ಅಧ್ಯಯನಗಳಿಗೆ ಬೇರೆ ಬೇರೆಯಾಗಿದೆ. ಮಾದರಿಯ ಅಧ್ಯಯನವು ಎಲ್ಲ ಮಕ್ಕಳು ಸಾಮರ್ಥ್ಯಗಳನ್ನು ತೃಪ್ತಿಕರವಾಗಿ ಈಡೇರಿಸುತ್ತಾರೆ. ಈ ಸಾಧನೆಯು ವಿವಿಧ ಅಂಶಗಳನ್ನು ಒಳಗೊಂಡಿರುತ್ತದೆ. ಅಧ್ಯಯನಗಳ ಪ್ರಕಾರ ಶೇಕಡ ೮೦ ಅಥವಾ ಹೆಚ್ಚು ಮಕ್ಕಳು ಕೊನೆಯ ಪಕ್ಷ ೮೦ ರಷ್ಟು ನಮೂದಿಸಿದ ಸಾಮರ್ಥ್ಯಗಳನ್ನು ಈಡೇರಿಸಿದರೆ ಅದನ್ನು ತೃಪ್ತಿಕರ ಈಡೇರಿಕೆ ಎಂದು ಪರಿಗಣಿಸಲಾಗುವುದು. ಆದ್ದರಿಂದ ೮೦-೮೦ ಮಟ್ಟವನ್ನು ಪ್ರಸ್ತುತ ಅಧ್ಯಯನದ ಕನಿಷ್ಠ ಕಲಿಕಾ ಮಟ್ಟಗಳನ್ನೊಳಗೊಂಡ ಪರಿಸರ ಅಧ್ಯಯನ (ವಿಜ್ಞಾನ)ದ 'ತೃಪ್ತಿಕರ ಮಟ್ಟ' ಎಂದು ಪರಿಗಣಿಸಲಾಗುವುದು. ಪೂರ್ವಾಧಾರಿತ ವಸ್ತುನಿಷ್ಠಿತ ಮಾದರಿ ಪರೀಕ್ಷೆ ಎಂದು ಶೈಕಾಷ್ಟ್(೧೯೭೯)ರಲ್ಲಿ ಸಿಫಾರಸ್ಸು ಮಾಡಿದ್ದಾರೆ. ಶೈಕಾಷ್ಟ್‌ರವರು ಪರೀಕ್ಷಕರ ಸ್ಥಿರತೆಯನ್ನು ಈ ಕೆಳಗಿನಂತೆ ವಿವರಿಸುತ್ತಾರೆ.

ನಡವಳಿಕೆಯ ನಿರೂಪಣೆಯನ್ನು, ಕಲಿಕೆಯ ಮೂಲ ಉದ್ದೇಶಗಳನ್ನು ಆಧಾರವಾಗಿಟ್ಟುಕೊಂಡು ರೂಪಿಸಲಾಗಿದೆ. ಪ್ರತಿ ಉದ್ದೇಶವು ಈ ಅಂಶಗಳನ್ನು ಪುಷ್ಟೀಕರಿಸುತ್ತದೆ.

i) ಮಗುವು ಬಳಸುವ ಕ್ರಿಯಾಪದ ತಾನು ಪ್ರಾಯೋಗಿಕವಾಗಿ ಬಳಸಲು ಕಲಿತ ಕ್ರಿಯಾಪದ ಇದಾಗಿರುತ್ತದೆ

ii) ನಿರೀಕ್ಷಿತ ಸಂದರ್ಭದಲ್ಲಿ ಅಪೇಕ್ಷಿಸಿದ ನಡೆವಳಿಕೆ

iii) ಮೂಲ ಉದ್ದೇಶದ ಪ್ರಗತಿಯನ್ನು ವರ್ಗದ ಆಧಾರದ ಮೇಲೆ ನಿರ್ಧರಿಸಲಾಗುವುದು

**೧. ಪ್ರತಿ ಸಾಮರ್ಥ್ಯದ ಮೇಲೆ ಪ್ರಶ್ನೆಗಳನ್ನು ನಿರ್ಧರಿಸಿದ ವಿಧಾನ :** ಸಾಧನಾ ಸಾಮರ್ಥ್ಯವು ಆಯ್ಕೆ ಮಾಡಿದ ಸಾಮರ್ಥ್ಯಗಳನ್ನು ಅವಲಂಬಿಸಿರುತ್ತದೆ. ಆಯ್ದ ಸಾಮರ್ಥ್ಯಗಳ ಆಧಾರದ ಮೇಲೆ ಪ್ರಶ್ನೆಗಳ ಸಂಖ್ಯೆಗಳು ಬದಲಾಗುತ್ತವೆ. ಎಲ್ಲಾ ಪ್ರಶ್ನೆಗಳನ್ನು ನಾಲ್ಕನೇ ತರಗತಿಯ ಪರಿಸರ ಅಧ್ಯಯನ (ವಿಜ್ಞಾನ) ಪುಸ್ತಕದಿಂದ ಆಯ್ದುಕೊಳ್ಳಲಾಗಿದೆ.

* ಪ್ರತಿ ಸಾಮರ್ಥ್ಯಗಳನ್ನು ಒಳಗೊಂಡ ಪ್ರಶ್ನೆಗಳಿಗೆ ಸರಿಯಾಗಿ ಉತ್ತರಿಸಿದ ವಿದ್ಯಾರ್ಥಿಗಳಲ್ಲಿ ಯಾರು ಶೇಕಡ ೮೦ ಅಥವಾ ಅದಕ್ಕಿಂತ ಹೆಚ್ಚು ಪ್ರತಿ ಸಾಮರ್ಥ್ಯದಲ್ಲಿ ಸಾಧನೆಗೈದರೆ ತೃಪ್ತಿಕರ ಸಾಧನೆ  ಎಂದು ಪರಿಗಣಿಸಲಾಗುವುದು.

* ಯಾರು ಶೇಕಡ ೮೦ ಅಥವಾ ಅದಕ್ಕಿಂತ ಹೆಚ್ಚು ಪ್ರತಿ ಹಾಗೂ ಎಲ್ಲಾ ಸಾಮರ್ಥ್ಯಗಳನ್ನು ಈಡೇರಿಸಿದರೆ ಅವರನ್ನು ಎಲ್ಲಾ ಸಾಮರ್ಥ್ಯಗಳ ಸಾಧಕರು ಎಂದು ಪರಿಗಣಿಸಲಾಗುವುದು.

* ಸಾಮರ್ಥ್ಯಗಳನ್ನೊಳಗೊಂಡ ಪ್ರಶ್ನೆಗಳ ಸಂಖ್ಯೆ ಹಾಗೂ ಅವುಗಳ ಮೇಲಿನ ಅಂಕಗಳನ್ನೊಳಗೊಂಡ ನಮೂನೆ ೧ರಲ್ಲಿ ಒದಗಿಸಲಾಗಿದೆ.

**ಕೋಷ್ಟಕ - ೧**

**ಸಾಧನೆಯನ್ನು ಸಾಧಿಸಲು ಉಪಯೋಗಿಸಿದ ಸಾಮರ್ಥ್ಯಗಳು, ಪ್ರಶ್ನೆಗಳ ಸಂಖ್ಯೆ ಹಾಗೂ ಅಂಕಗಳು**

| **ಸಾಮರ್ಥ್ಯಗಳು** | **ಒಟ್ಟು ಸಂಖ್ಯೆ** | **ಅಂಕಗಳು** |
|---|---|---|
| ೧. ಸಸ್ಯ ಸಂಪತ್ತಿನ ಉಪಯೋಗ ಮತ್ತು ಅವುಗಳ ಕಾರ್ಯವನ್ನು ಗೊತ್ತು ಪಡಿಸುವುದು. | ೦೫ | ೦೫ |
| ೨. ಪ್ರಕೃತಿಯ ವಾತಾವರಣಕ್ಕೆ ತಕ್ಕಂತೆ ನೀರಿನ ವಿವಿಧ ಭೌತಿಕ ಸ್ಥಿತಿಯನ್ನು ತಿಳಿಸುವುದು. | ೦೫ | ೦೫ |
| ೩. ಪ್ರಕೃತಿಯಲ್ಲಿರುವ ವಿವಿಧ ಬಗೆಯ ವಸ್ತುಗಳು ಮತ್ತು ಅವುಗಳ ಭೌತಿಕ ಸ್ಥಿತಿಗಳ ಬಗ್ಗೆ ಜ್ಞಾನವನ್ನು ಮೂಡಿಸುವುದು. | ೦೫ | ೦೫ |
| ೪. ವಸ್ತುಗಳ ವಿವಿಧ ಬಗೆಯ ರುಚಿಗಳನ್ನು ಗೊತ್ತುಪಡಿಸುವುದು. | ೦೫ | ೦೫ |
| ೫. ಪ್ರಾಣಿ ಉತ್ಪನ್ನ ಮತ್ತು ಸಸ್ಯ ಉತ್ಪನ್ನಗಳಾಗಿ ವಿಂಗಡಿಸುವುದು. | ೦೫ | ೦೫ |
| ೬. ನೀರಿನಲ್ಲಿ ಹುದುಗಿರುವ ವಿವಿಧ ಕಶ್ಮಲಗಳನ್ನು ಬೇರ್ಪಡಿಸುವ ವಿಧಾನಗಳ ಬಗ್ಗೆ ಜ್ಞಾನವನ್ನು ಮೂಡಿಸುವುದು. | ೦೫ | ೦೫ |

೭. ತಾಪಮಾನಕ್ಕೆ ತಕ್ಕಂತೆ ವಸ್ತುವಿನ ಸ್ಥಿತಿಗಳಲ್ಲಾಗುವ ಬದಲಾವಣೆಗಳನ್ನು ಗೊತ್ತು ಪಡಿಸುವುದು. ೦೫ ೦೫

೮. ಸಮತೋಲನ ಆಹಾರ ಹಾಗೂ ಆರೋಗ್ಯದ ಅವಶ್ಯಕತೆಯ ಬಗ್ಗೆ ಅರ್ಥೈಸುವುದು. ೦೫ ೦೫

೯. ವಿವಿಧ ತರಕಾರಿಗಳ ಅವಶ್ಯಕತೆ ಹಾಗೂ ಅವುಗಳ ಸಂಸ್ಕರಣೆ ಬಗ್ಗೆ ಜ್ಞಾನವನ್ನು ಮೂಡಿಸುವುದು. ೦೫ ೦೫

೧೦. ನಮ್ಮ ದೇಹದಲ್ಲಿರುವ ವಿವಿಧ ಅಂಗಗಳನ್ನು ಪರಿಚಯಿಸುವುದು ಮತ್ತು ಅವುಗಳ ಕಾರ್ಯದ ಬಗ್ಗೆ ಅರಿವು ಮೂಡಿಸುವುದು.[೧] ೦೫ ೦೫

**೨. ಮಾಹಿತಿಯ ಸಂಗ್ರಹಣೆಗಾಗಿ ನಿರ್ಮಿಸಿದ ನಿರೂಪಣೆ :** ಮಕ್ಕಳ ವಯಸ್ಸು ಹಾಗೂ ಅವರ ಬುದ್ಧಿಮಟ್ಟವನ್ನು ಗಮನದಲ್ಲಿಟ್ಟುಕೊಂಡು ನಿಯಮಗಳನ್ನು ರೂಪಿಸಲಾಗಿದೆ. ಪರೀಕ್ಷೆ ನಡೆಸಲು ರೂಪಿಸಿದ ನಿಯಮಗಳನ್ನು ಸಾಮಾನ್ಯ ಮಾರ್ಗದರ್ಶಿಯ ಮುಖಪುಟದಲ್ಲಿ ಒದಗಿಸಲಾಗಿದೆ. ಮತ್ತು ನಿರ್ದಿಷ್ಟ ಮಾರ್ಗಸೂಚಿಗಳನ್ನು ಪ್ರಶ್ನೆಗಳೊಂದಿಗೆ ವಿವರಿಸಲಾಗಿದೆ. ಮಕ್ಕಳಿಂದ ಉದ್ದೇಶಿತ ಪ್ರತಿಕ್ರಿಯೆಯನ್ನು ಪಡೆಯಲು ಅನುಕೂಲವಾಗುವಂತೆ ಪ್ರತಿ ಪ್ರಶ್ನೆಯನ್ನು ಉದಾಹರಣೆಯೊಂದಿಗೆ ವಿವರಿಸಲಾಗಿದೆ. ಈ ಮುಖಪುಟವು ಕೆಲವು ಖಾಲಿ ಸ್ಥಳಗಳನ್ನು ಹೊಂದಿದ್ದು ಸಂಶೋಧಕನಿಗೆ ಮಕ್ಕಳ ಪ್ರತಿಕ್ರಿಯೆಯನ್ನು ಲಿಂಗ, ಹೆಸರು ಹಾಗೂ ಶಾಲೆ ಇತ್ಯಾದಿಗಳಿಂದ ತಿಳಿಯಲು ಸಹಾಯಕವಾಗಿದೆ.

**೩. ೫. ಪೂರ್ವ ಪರೀಕ್ಷೆ**

ಪರೀಕ್ಷೆಗಾಗಿ ಸಿದ್ಧಪಡಿಸಿದ ಪ್ರಶ್ನೆ ಪತ್ರಿಕೆಯ ಪ್ರತಿಗಳನ್ನು ಆಯ್ಕೆ ಮಾಡಿದ ಸಾಮರ್ಥ್ಯಗಳ ಪಟ್ಟಿಯೊಂದಿಗೆ ವಿಷಯ ತಜ್ಞರಾದ ಶ್ರೀ ಬಸಪ್ಪ, ಶ್ರೀ ರಾಘವೇಂದ್ರ ಉಪನ್ಯಾಸಕರು ವ್ಯಾಸಪುರಿ ಪದವಿ ಪೂರ್ವ ಕಾಲೇಜ್ ವ್ಯಾಸನಕೆರೆ ಮತ್ತು ನಾಲ್ಕನೇ ತರಗತಿಯ ಪರಿಸರ ಅಧ್ಯಯನ (ವಿಜ್ಞಾನ) ಪಾಠ ಬೋಧಕರಾದ ಶ್ರೀಮತಿ ಗೀತ, ಶ್ರೀ ಮಂಜುನಾಥ, ಶ್ರೀ ಷಡಕ್ಷರಿ, ಶ್ರೀಮತಿ ಸಣ್ಣಹನುಮಕ್ಕ, ಶ್ರೀ ಬಾಲರಾಜರವರುಗಳಿಗೆ ನೀಡಲಾಯಿತು. ಆಯ್ಕೆ ಮಾಡಿದ ಪ್ರತಿ ಪ್ರಶ್ನೆಗಳ ಮೌಲ್ಯ ಹಾಗೂ ಸಾಮರ್ಥ್ಯಗಳಿಗಿರುವ ಸಂಬಂಧಗಳನ್ನು ಮತ್ತು ಪ್ರಶ್ನೆ ಪತ್ರಿಕೆಯನ್ನು ಸೂಕ್ಷ್ಮವಾಗಿ ಅವಲೋಕಿಸಲು ಮನವಿ ಮಾಡಿಕೊಳ್ಳಲಾಯಿತು. ಇವರುಗಳ ಅಭಿಪ್ರಾಯದ ಮೇರೆಗೆ ಪ್ರಶ್ನೆ ಪತ್ರಿಕೆಯಲ್ಲಿ ಸೂಕ್ತವಾದ ಬದಲಾವಣೆಗಳನ್ನು ಮಾಡಲಾಗಿದೆ.

ಈ ತಜ್ಞರಿಂದ ಪರಿಷ್ಕೃತಗೊಂಡ ಪ್ರಶ್ನೆಪತ್ರಿಕೆಯನ್ನು ಲಾಲ್‌ಬಹದ್ದೂರ್ ಶಾಸ್ತ್ರಿ ಹಿರಿಯ ಪ್ರಾಥಮಿಕ ಶಾಲೆ, ಸರಕಾರಿ ಶ್ರೀ ಉಜ್ಜಿನಿ ಜಗದ್ಗುರು ಪ್ರಾಥಮಿಕ ಶಾಲೆ, ಖಾಸಗಿ ಹಾಗೂ ಬಾಲಕರ ಹಿರಿಯ ಪ್ರಾಥಮಿಕ ಶಾಲೆ ಮತ್ತು ಎಸ್.ಯು.ಜೆ.ಎಸ್. ಗ್ರಾಮೀಣ ಸರ್ಕಾರಿ ಹಾಗೂ ಖಾಸಗಿ ಶಾಲೆಗಳನ್ನು ಆಯ್ದುಕೊಳ್ಳಲಾಗಿದೆ. ಪ್ರತಿ ಶಾಲೆಯ ವಿಷಯ ಬೋಧಕರ ಸಹಾಯದಿಂದ ಸಂಶೋಧಕರು ಎರಡು ಉತ್ತಮ ಸಾಧನೆಯ ಮಕ್ಕಳು ಹಾಗೂ ಎರಡು ಅತಿ ಕಡಿಮೆ ಸಾಧನೆಯ ನಾಲ್ಕನೇ ತರಗತಿಯಲ್ಲಿ ಓದುತ್ತಿರುವ ಬೇಡ ಸಮುದಾಯದ ಒಟ್ಟು ನಾಲ್ಕು ಮಕ್ಕಳನ್ನು ಪ್ರತಿ ಶಾಲೆಯಿಂದ ಆಯ್ದುಕೊಳ್ಳಲಾಗಿದೆ. ಈ ಪರೀಕ್ಷೆಯು ಮಕ್ಕಳಿಗೆ ಪರೀಕ್ಷಾ ಸಮಯದಲ್ಲಿ ಒದಗಿಬರುವ ಸಮಸ್ಯೆಗಳು ಹಾಗೂ ಸಮಯವನ್ನು ನಿರ್ಧರಿಸುವ ಉದ್ದೇಶವನ್ನು ಹೊಂದಿರುತ್ತದೆ. ಪ್ರತಿ ಹಂತದಲ್ಲಿ ಮೂರು ಅಥವಾ ನಾಲ್ಕು ಸಾಮರ್ಥ್ಯಗಳನ್ನು ಪ್ರಾಯೋಗಿಕವಾಗಿ ಬಳಸಲಾಗುತ್ತದೆ.

ಪ್ರತಿ ಸಾಮರ್ಥ್ಯಗಳನ್ನೊಳಗೊಂಡ ಪ್ರಶ್ನೆಗಳಿಗೆ ಉತ್ತರಿಸಿದ ಸಮಯವನ್ನು ದಾಖಲಿಸಲಾಗುವುದು ಉತ್ತಮ ಸಾಧನೆಯ ಮಕ್ಕಳು ಪ್ರಶ್ನೆಗಳಿಗೆ ಉತ್ತರಿಸಲು ತೆಗೆದುಕೊಂಡ ಒಟ್ಟು ಸರಾಸರಿ ಸಮಯ ೫೦ ನಿಮಿಷಗಳಾದರೆ ಅತಿ ಕಡಿಮೆ ಸಾಧನೆಯ ಮಕ್ಕಳು ಪ್ರಶ್ನೆಗಳಿಗೆ ಉತ್ತರಿಸಲು ತೆಗೆದುಕೊಂಡ ಒಟ್ಟು ಸರಾಸರಿ ಸಮಯ ೬೫ ನಿಮಿಷಗಳಾಗಿವೆ.

ಈ ಪರೀಕ್ಷಾ ಕ್ರಮದ ಆಧಾರದ ಮೇಲೆ ಸಂಶೋಧಕರು ಈ ಕೆಳಗಿನ ಅಂಶಗಳನ್ನು ನಿರ್ಧರಿಸುತ್ತಾರೆ.

ಪರೀಕ್ಷಾ ನಿರ್ವಹಣೆಯಲ್ಲಿ ಸೂಕ್ತ ತಿದ್ದುಪಡಿಗಳನ್ನು ಮಾಡಲಾಗಿದೆ. ಪ್ರಶ್ನೆ ಪತ್ರಿಕೆಯ ಪ್ರತಿಯನ್ನು ನಮೂನೆ-೧ ರಲ್ಲಿ ಕಾಣಬಹುದು.

ಪ್ರಾಥಮಿಕ ಶಾಲಾ ಬೋಧಕ ವರ್ಗಕ್ಕೆ ತರಬೇತಿಯ ಆಧಾರದ ಮೇಲೆ ಅಂದರೆ ತರಬೇತಿ ಪಡೆಯದೇ ಇರುವ ಶಿಕ್ಷಕರು ೫ ತರಬೇತಿಗಿಂತ ಕಡಿಮೆ ತರಬೇತಿ ಪಡೆದ ಶಿಕ್ಷಕರು ಮತ್ತು ೫ ತರಬೇತಿಗಿಂತ ಹೆಚ್ಚು ತರಬೇತಿ ಪಡೆದ ಶಿಕ್ಷಕರು ವಿಂಗಡಿಸಲಾಗುವುದು. ಪ್ರತಿ ಗುಂಪಿನಿಂದ ಇಬ್ಬರು ಶಿಕ್ಷಕರಿಗೆ ಸಿದ್ಧಪಡಿಸಿದ ಪ್ರಶ್ನೆ ಪತ್ರಿಕೆಯನ್ನು ನೀಡಿ ಅವರ ಮುಕ್ತ ಅಭಿಪ್ರಾಯವನ್ನು ಆಧಾರವಾಗಿಟ್ಟುಕೊಂಡು ಸಮಯ ಹಾಗೂ ಪ್ರಶ್ನೆ ಪತ್ರಿಕೆಯಲ್ಲಿ ಕೆಲವು ಬದಲಾವಣೆಗಳನ್ನು ಮಾಡಿದ ನಂತರ ಮೊದಲೇ ತಿಳಿಸಿರುವಂತೆ ಉಳಿದ ಶಿಕ್ಷಕರಿಗೆ ಪ್ರಶ್ನೆ ಪತ್ರಿಕೆಯನ್ನು ಒದಗಿಸಿ ಅಭಿಪ್ರಾಯಗಳನ್ನು ಪಡೆಯಲಾಗುವುದು. ಪ್ರಶ್ನೆ ಪತ್ರಿಕೆಯ ಮಾದರಿಯನ್ನು ನಮೂನೆ-೨ ರಲ್ಲಿ ಕಾಣಬಹುದು.

ಶಾಲಾ ಮುಖ್ಯಗುರುಗಳ ಅಭಿಪ್ರಾಯವನ್ನು ಕೂಡ ಸಿದ್ಧಪಡಿಸಿದ ಪ್ರಶ್ನೆ ಪತ್ರಿಕೆಯನ್ನು ಒದಗಿಸಿ ಅಭಿಪ್ರಾಯ ಪಡೆಯಲಾಗುವುದು. ಇದು ಶಾಲಾ ಅಭಿವೃದ್ಧಿ ಹಾಗೂ ಮಕ್ಕಳ ಸರ್ವತೋಮುಖ ಬೆಳವಣಿಗೆಗೆ ಸಮುದಾಯದ

ಪಾತ್ರ ಎಷ್ಟು ಪರಿಣಾಮಕಾರಿಯಾಗಿದೆ ಎಂದು ತಿಳಿಸಲು ರೂಪಿಸಲಾದ ಪ್ರಶ್ನೆ ಪತ್ರಿಕೆಯ ಮಾದರಿಯನ್ನು ನಮೂನೆ-೩ರಲ್ಲಿ ಕಾಣಬಹುದು.

### ೩. ೬. ಪರೀಕ್ಷೆಯ ಧಾರಾಳತೆಯನ್ನು ಸಿದ್ಧಪಡಿಸಿದ ವಿಧಾನ

ಯಾವುದೇ ಪರೀಕ್ಷೆಯ ಸ್ಥಿರ ಫಲಿತಾಂಶಗಳು ಹೊರ ಬರುವುದು ಪರೀಕ್ಷೆಯ ಧಾರಾಳತೆಯನ್ನು ಹೊಂದಿರುತ್ತದೆ. ಈ ಧಾರಾಳತೆಯು ನಿಖರವಾದ ನಿರ್ಧಾರವನ್ನು ನೀಡುತ್ತದೆ. ಇದು ವಿದ್ಯಾರ್ಥಿಗಳನ್ನು ಉತ್ತಮ ಸಾಧನೆ ಮತ್ತು ಉತ್ತಮವಲ್ಲದ ಸಾಧನೆಗಳಾಗಿ ಎರಡು ರೀತಿಯಲ್ಲಿ ವರ್ಗೀಕರಿಸಬಹುದು. ಈ ಧಾರಾಳತೆಯನ್ನು ವರ್ಗೀಕರಣ ಧಾರಾಳತೆಯಿಂದ ಪ್ರತಿ ಅಂಶದ ಮೇಲಿನ ಸ್ಥಿರತೆಯನ್ನು ಗೊತ್ತುಪಡಿಸಬಹುದು.

**೧. ವರ್ಗೀಕರಣ ಧಾರಾಳತೆ :** ಪ್ರಸ್ತುತ ಪರೀಕ್ಷೆಯು ೧೦ ಸಾಮರ್ಥ್ಯಗಳನ್ನು ಒಳಗೊಂಡಿದ್ದು, ಪ್ರತಿ ಸಾಮರ್ಥ್ಯದ ಮೇಲೆ ೫ ಪ್ರಶ್ನೆಗಳನ್ನು ರೂಪಿಸಲಾಗಿದೆ. ಈ ಪರೀಕ್ಷೆಯ ಫಲಿತಾಂಶಗಳನ್ನು ಸಂತ ಜೋಸೆಫ್ ಶಾಲೆ ಹಾಗೂ ಜಿಲ್ಲಾ ಪರಿಷತ್ ಶಾಲೆ ಹೊಸಪೇಟೆ ವರ್ಗೀಕರಣ ಧಾರಾಳತೆಯನ್ನು ಪರೀಕ್ಷಿಸಲು ತೆಗೆದುಕೊಳ್ಳಲಾಗಿದೆ. ಎಲ್ಲ ೫೦ ವಿದ್ಯಾರ್ಥಿಗಳಲ್ಲಿ ಪ್ರತಿ ಶಾಲೆಯಿಂದ ೨೫ ವಿದ್ಯಾರ್ಥಿಗಳನ್ನು ಪೂರ್ವ ಪರೀಕ್ಷೆಗೆ ಒಳಪಡಿಸಲಾಗಿದೆ.

ಪರೀಕ್ಷೆಯ ಫಲಿತಾಂಶಗಳನ್ನು ವರ್ಗೀಕರಿಸಿ ಬೆಸಸಂಖ್ಯೆ ಹಾಗೂ ಸರಿಸಂಖ್ಯೆಗಳಾಗಿ ಪ್ರತ್ಯೇಕವಾಗಿ ಪ್ರತಿ ಸಾಮರ್ಥ್ಯದ ಆಧಾರದ ಮೇಲೆ ವಿಂಗಡಿಸಲಾಗಿದೆ. ಕೋಹೆನ್ಸ್‌ರವರ (೧೯೬೦) ಕಪ್ಪಾ ಮಾರ್ಪು(K)ನ್ನು ಪೂರ್ವ ಪರೀಕ್ಷೆಯ ಫಲಿತಾಂಶಗಳ ಮೇಲೆ ಸ್ಥಿರ ಧಾರಾಳತೆಯನ್ನು ತಿಳಿಯಲು ಬಳಸಲಾಗಿದೆ. ಇದಕ್ಕಾಗಿ ಬಳಸಿದ ಸೂತ್ರ

$$K = \frac{Po - Pc}{1 - Po}$$

ಇಲ್ಲಿ,

Po - ವೀಕ್ಷಿಸಿದ ಭಾಗ ಮತ್ತು

Pc - ಸಂಭವಿಸಬಹುದಾದ ಭಾಗ

Po ಮತ್ತು Pcಗಳು ಈ ಕೆಳಗಿನ ರೀತಿಯಲ್ಲಿ ದೊರೆಯುತ್ತವೆ.

$Po = a+b$

$Pc = (a+c)(a+b)+(b+d)(c+d)$

ಇಲ್ಲಿ,

a = ಎರಡು ಪ್ರಯೋಗಗಳಲ್ಲಿ ಉತ್ತಮ ಸಾಧನೆ ಮಾಡಿದ ವಿದ್ಯಾರ್ಥಿಗಳ ಭಾಗ

b = ಒಂದು ಪ್ರಯೋಗದಲ್ಲಿ ಉತ್ತಮ ಸಾಧನೆಯ ವಿದ್ಯಾರ್ಥಿಗಳ ಭಾಗ

c = ಇನ್ನೊಂದು ಪ್ರಯೋಗದಲ್ಲಿ ಉತ್ತಮ ಸಾಧನೆ ಮಾಡದೆ ಇರುವ ವಿದ್ಯಾರ್ಥಿಗಳ ಭಾಗ

d = ಎರಡೂ ಪ್ರಯೋಗಗಳಲ್ಲಿ ಉತ್ತಮ ಸಾಧನೆ ಮಾಡದಿರುವ ವಿದ್ಯಾರ್ಥಿಗಳ ಭಾಗ

ಗರಿಷ್ಟ Kನ ಬೆಲೆಯನ್ನು ಹೆಚ್ಚುವರಿ ಮಾಹಿತಿಯ ಆಧಾರದಿಂದ ನಿಖರವಾದ ಬೆಲೆಯನ್ನು ಗೊತ್ತು ಮಾಡಬಹುದು. ಗರಿಷ್ಟ ಬೆಲೆಯನ್ನು ಯಾವುದಾದರೂ ಒಂದು ಕವಚದ b ಅಥವಾ cಗಳ ಬೆಲೆಯನ್ನು ಬೇರೆ ಬೆಲೆಗಳು ಬದಲಾಗದಂತೆ '0' (ಸೊನ್ನೆ) ಮಾಡಿ ಕಂಡು ಹಿಡಿಯಬಹುದು. ವಿವರಣೆಯನ್ನು ಕೋಷ್ಟಕ-೨ ರಲ್ಲಿ ಕಾಣಬಹುದು.

**ಕೋಷ್ಟಕ - ೨ ಉಪ ಪರೀಕ್ಷೆಗಳಿಂದ ಮಾಪನ ವರ್ಗೀಕರಣ ಧಾರಾಳ ಸ್ಥಿರತೆ**

| ಪ್ರಯೋಗ | Po | Pc | K | K- ಗರಿಷ್ಟ |
|---|---|---|---|---|
| ೧. | ೦.೭೫ | ೦.೪೯೯ | ೦.೫೦೧ | ೦.೭೯೨ |
| ೨. | ೦.೮೨ | ೦.೫೦೮ | ೦.೬೩೪ | ೦.೮೪೦ |
| ೩. | ೦.೮೬ | ೦.೭೩೨ | ೦.೪೭೮ | ೦.೮೫೪ |
| ೪. | ೦.೮೪ | ೦.೭೩೦ | ೦.೩೯೧ | ೦.೮೫೨ |
| ೫. | ೦.೭೮ | ೦.೫೦೧ | ೦.೫೯೯ | ೦.೯೫೧ |
| ೬. | ೦.೭೪ | ೦.೫೫೮ | ೦.೪೧೨ | ೦.೯೫೫ |
| ೭. | ೦.೭೦ | ೦.೫೧೧ | ೦.೩೬೮ | ೦.೭೯೫ |
| ೮. | ೦.೮೬ | ೦.೭೩೨ | ೦.೪೭೮ | ೦.೮೫೪ |
| ೯. | ೧.೦೦ | ೦.೭೩೧ | ೦.೧೦೦ | ೧.೦೦ |
| ೧೦. | ೦.೯೧ | ೦.೮೪೯ | ೦.೪೦೪ | ೦.೭೨೭ |

## ೩. ೭. ಪರೀಕ್ಷಾ ವಿಷಯದ ಮೇಲಿನ ಮೌಲ್ಯ

ಸಾಧನಾ ಪರೀಕ್ಷೆಗಳಲ್ಲಿ ವಿಷಯದ ಮೌಲ್ಯವು ಅತ್ಯ ಅವಶ್ಯಕವಾದ ಅಂಶವಾಗಿದೆ. ವಿಷಯ ತಜ್ಞರಿಂದ ಪ್ರತಿ ಅಂಶಗಳನ್ನು ಈ ಮೇಲಿನ ಆಧಾರದಿಂದ ವಿಮರ್ಶೆಗೆ ಒಳಪಡಿಸಿ ಪ್ರಶ್ನೆಪತ್ರಿಕೆಯ ಮೌಲ್ಯವನ್ನು ಪೂರ್ವಾಧರಿತವಾಗಿ ಆಯ್ದ ವಿದ್ಯಾರ್ಥಿಗಳಿಗೆ ಪ್ರಾಯೋಗಿಕವಾಗಿ ಪರೀಕ್ಷಿಸಿ ವಿಷಯದ ಮೇಲಿನ ಮೌಲ್ಯವನ್ನು ಖಾತ್ರಿಪಡಿಸಿಕೊಳ್ಳುವುದು.

**೧. ಉಪ ಪರೀಕ್ಷೆಗಳ ಮೌಲ್ಯ :** ವಿಷಯದ ಮೌಲ್ಯವನ್ನು ಉಪ ಪರೀಕ್ಷೆಗಳ ಮೇಲಿನ ಕಪ್ಪಾ ಮಾರ್ಪಿನ ಗುಣಾಂಕದಿಂದ ಪಡೆಯಲಾಗಿದೆ. ದೊರೆತ ಮೌಲ್ಯಗಳನ್ನು ಕೋಷ್ಟಕ -೩ ರಲ್ಲಿ ಒದಗಿಸಲಾಗಿದೆ.

**ಕೋಷ್ಟಕ -೩ ಕಪ್ಪಾ ಗುಣಾಂಕದ ಮೇಲಿನ ಉಪ ಪರೀಕ್ಷೆಗಳ ಮೌಲ್ಯ**

| ಪರೀಕ್ಷೆ | Po | Pc | K | K - ಗರಿಷ್ಟ |
|---|---|---|---|---|
| ೧. | ೦.೫೨ | ೦.೨೯೫ | ೦.೩೧೯ | ೦.೩೨೦ |
| ೨. | ೦.೩೫ | ೦.೧೧೧ | ೦.೨೬೮ | ೦.೨೭೦ |
| ೩. | ೦.೬೩ | ೦.೫೯೩ | ೦.೦೯೧ | ೦.೧೦೦ |
| ೪. | ೦.೫೪ | ೦.೩೧೦ | ೦.೩೩೩ | ೦.೩೩೩ |
| ೫. | ೦.೩೦ | ೦.೨೭೧ | ೦.೦೪೦ | ೦.೦೪೦ |
| ೬. | ೦.೪೪ | ೦.೨೫೬ | ೦.೭೪೦ | ೦.೭೪೦ |
| ೭. | ೦.೨೮ | ೦.೧೮೧ | ೦.೧೨೦ | ೦.೧೨೦ |
| ೮. | ೦.೩೮ | ೦.೨೨೧ | ೦.೨೦೦ | ೦.೨೧೦ |
| ೯. | ೦.೯೨ | ೦.೭೮೦ | ೧.೬೪೦ | ೧.೬೪೦ |
| ೧೦. | ೦.೭೬ | ೦.೬೯೨ | ೦.೨೨೧ | ೦.೨೨೦ |

ಕೋಷ್ಟಕ- ೩ರ ಬೆಲೆಗಳಲ್ಲಿ K ಮತ್ತು K-ಗರಿಷ್ಟದ ಬೆಲೆಗಳು ಒಂದೇಯಾಗಿ ತೋರುತ್ತವೆಯಾದರೂ Kಬೆಲೆಗಳು ೦.೯೨ಕ್ಕಿಂತ ಹೆಚ್ಚು ಎಂದು ಪರಿಗಣಿಸಲಾಗುವುದು. ಇವು ಉಪ ಪರೀಕ್ಷೆಗಳ ಮೌಲ್ಯವನ್ನು ಮಕ್ಕಳ ವರ್ಗೀಕರಣದ ಮೇಲೆ ಅಂದರೆ, ಉಪಪರೀಕ್ಷೆಗಳ ಮೂಲಕ ಉತ್ತಮ ಸಾಧನೆಯ ವಿದ್ಯಾರ್ಥಿಗಳು ಮತ್ತು ಉತ್ತಮ ಸಾಧನೆಯಲ್ಲದ ವಿದ್ಯಾರ್ಥಿಗಳಾಗಿ ವರ್ಗೀಕರಿಸಬಹುದಾಗಿದೆ.

## ೩. ೮. ಮಾಹಿತಿ ಸಂಗ್ರಹಣಾ ವಿಧಾನ

ಕ್ಷೇತ್ರದ ಆಯ್ಕೆ ಹಾಗೂ ಪೂರ್ವಾಧಾರಿತ ಸಾಧನಾ ಪರೀಕ್ಷೆಯನ್ನು ಸಿದ್ಧಪಡಿಸಿದ ನಂತರ, ಸಂಶೋಧನೆಗೆ ಪೂರಕ ಮಾಹಿತಿಗಾಗಿ ಕ್ಷೇತ್ರ ಪರಿವೀಕ್ಷಣೆ ಮಾಡುವುದು ಮಾರ್ಗದರ್ಶಕರಿಂದ ಅನುಮತಿ ಪತ್ರ ಮತ್ತು ವಿಶ್ವವಿದ್ಯಾಲಯದಿಂದ ಶಿಕ್ಷಣ ಇಲಾಖೆಗೆ ಅನುಮತಿ ಕೋರಿ ಪತ್ರ ಹಾಗೂ ಶಾಲೆಗಳ ಮುಖ್ಯ ಗುರುಗಳಿಂದ ಪರೀಕ್ಷೆ ನಡೆಸಲು ಅನುಮತಿ ಪಡೆದು ಸಂಶೋಧಕ ಜಿಲ್ಲೆಯ ಆಯ್ದ ಶಾಲೆಗಳಿಗೆ ಭೇಟಿ ನೀಡಿ ತರಗತಿ ಬೋಧಕರ ಅನುಮತಿ ಪಡೆದು ನಾಲ್ಕನೇ ತರಗತಿ ಬೇಡ ಸಮುದಾಯದ ಮಕ್ಕಳಿಗೆ ಪರೀಕ್ಷೆ ನಡೆಸಲಾಗಿದೆ.

**೧. ಸಾಧನಾ ಪರೀಕ್ಷೆಯ ನಿರ್ವಹಣೆ :** ಪರೀಕ್ಷೆಯನ್ನು ಈ ಮೊದಲೇ ತಿಳಿಸಿರುವಂತೆ ಗರಿಷ್ಠ ಎರಡು ಗಂಟೆಗಳ ಕಾಲ ನಡೆಸಲಾಗಿದೆ. ಪರೀಕ್ಷೆಯನ್ನು ಸಂಶೋಧಕರು ಜಿಲ್ಲೆಯ ಆಯ್ದ ಶಾಲೆಗಳಲ್ಲಿ ಖುದ್ದಾಗಿ ನಡೆಸಿರುತ್ತಾರೆ. ಇದು ಪರೀಕ್ಷಾ ಸಮಯದಲ್ಲಿ ಶಿಕ್ಷಕರು ಮಕ್ಕಳಿಗೆ ಪ್ರೇರಣೆ ನೀಡುವುದನ್ನು ತಡೆಯುವುದಾಗಿದ್ದು, ಸಂಶೋಧಕರು ಶಿಕ್ಷಕರಿಗೆ ಪರೀಕ್ಷಾ ಸಮಯದಲ್ಲಿ ಕೊಠಡಿಗೆ ಬಾರದಿರಲು ಮನವಿ ಮಾಡಿಕೊಳ್ಳುತ್ತಾರೆ. ಪರೀಕ್ಷೆಯು ಸಾಮಾನ್ಯ ಕೊಠಡಿಯ ಆವರಣದಲ್ಲಿ ಶಾಲಾ ಅವಧಿಯಲ್ಲಿ ನಡೆಸಲಾಗಿದೆ. ಸಂಶೋಧಕರು ಮುಖ ಪುಟದಲ್ಲಿಯ ವೈಯಕ್ತಿಕ ಮಾಹಿತಿಯನ್ನು ತುಂಬಲು ವಿದ್ಯಾರ್ಥಿಗಳಿಗೆ ಸಹಾಯ ಮಾಡಿದರು. ಕೆಲವು ಶಾಲೆಗಳಲ್ಲಿ ಸಂಶೋಧಕರು ಪರೀಕ್ಷಾ ಸಮಯದಲ್ಲಿ ಮಕ್ಕಳನ್ನು ಕರೆದು ವೈಯಕ್ತಿಕ ಮಾಹಿತಿ ಸರಿ ಇದೆಯೇ ಎನ್ನುವುದನ್ನು ಖಾತ್ರಿ ಮಾಡಿಕೊಂಡರು. ಇದು ಒಂದು ಪ್ರತ್ಯಕ್ಷ ಪ್ರಯೋಗವಾಗಿ ಪರಿಣಾಮಕಾರಿಯಾಯಿತು. ಮಕ್ಕಳ ಪ್ರತಿಕ್ರಿಯೆಯನ್ನು ಅಲ್ಲಲ್ಲಿ ಉದಾಹರಣೆ ನೀಡುತ್ತಾ ಉತ್ತೇಜಿಸಲಾಯಿತು. ಸಂಶೋಧಕರು ಪರೀಕ್ಷಾ ಸಮಯದಲ್ಲಿ ಅಂತರಿಕ ಹಾಗೂ ಬಾಹ್ಯ ಅಡಚಣೆಗಳ ಬಗ್ಗೆ ಹೆಚ್ಚಿನ ಜಾಗೃತಿವಹಿಸಿದ್ದರು. ಪರೀಕ್ಷಾ ಸಮಯದಲ್ಲಿ ಮಕ್ಕಳಿಗೆ ಅವಶ್ಯಕತೆಗೆ ಅನುಗುಣವಾಗಿ ಉತ್ತಮ ರೀತಿಯಲ್ಲಿ ಉತ್ತರಿಸಲು ಸಂಶೋಧಕರು ಮಾರ್ಗದರ್ಶನ ನೀಡುತ್ತಿದ್ದರು.

## ೩. ೯. ಅಂಕಗಳ ವರ್ಗೀಕರಣ

ಲಿಖಿತ ಪರೀಕ್ಷೆಯು ಒಟ್ಟು ೫೦ ಪ್ರಶ್ನೆಗಳನ್ನು ಆಯ್ದು ೧೦ ಸಾಮರ್ಥ್ಯಗಳನ್ನು ಒಳಗೊಂಡಿದ್ದಾಗಿದೆ. ಪ್ರತಿ ಸಾಮರ್ಥ್ಯದ ಮೇಲೆ ೫ ಪ್ರಶ್ನೆಗಳನ್ನು ರೂಪಿಸಲಾಗಿದೆ. ಪ್ರತಿ ವಿದ್ಯಾರ್ಥಿ ನಾಲ್ಕು ಅಥವಾ ಎಲ್ಲಾ ಐದು ಪ್ರಶ್ನೆಗಳಿಗೆ ಉತ್ತರಿಸಿದರೆ, ಆತನನ್ನು ಉತ್ತಮ ಸಾಧಕ ಎಂದು ಪರಿಗಣಿಸಲಾಗುವುದು. ಪ್ರತಿ ಪ್ರಶ್ನೆಯು ೧ ಅಂಕಗಳದಾಗಿದ್ದು

ಉತ್ತರ ಸರಿ ಇದ್ದರೆ ೧ ಅಂಕ ಇಲ್ಲವಾದಲ್ಲಿ ೦ ಅಂಕ ನೀಡಲಾಗುವುದು. ಉತ್ತರ ಪತ್ರಿಕೆಯನ್ನು ನಮೂನೆ-೨ರಲ್ಲಿ ನೀಡಲಾಗಿದೆ.

### ೩. ೧೦. ಮಾಹಿತಿ ವಿಶ್ಲೇಷಣಾ ತಂತ್ರವಿಧಾನ

ಪ್ರಸ್ತುತ ಅಧ್ಯಯನದ ವಿಶ್ಲೇಷಣೆಯು ದ್ವಿಮಾನ ಕ್ರಿಯಾಪರೀಕ್ಷಾ ವಿಧಾನವನ್ನು ಅಳವಡಿಸಲಾಗಿದೆ. ಇದು ನಾಲ್ಕನೇ ತರಗತಿಯಲ್ಲಿ ಓದುತ್ತಿರುವ ಮಕ್ಕಳು ಪರಿಸರ ಅಧ್ಯಯನ (ವಿಜ್ಞಾನ)ದಲ್ಲಿ ಅಳವಡಿಸಿದ ಪ್ರತಿ ಹಾಗೂ ಎಲ್ಲಾ ಸಾಮರ್ಥ್ಯಗಳ ಉತ್ತಮ ಸಾಧನೆಯ ಭಾಗವನ್ನು ಗೊತ್ತು ಪಡಿಸಲು ಉಪಯೋಗಿಸಲಾಗಿದೆ.

ಅದೇ ರೀತಿ ಪ್ರಸ್ತುತ ಅಧ್ಯಯನದಲ್ಲಿ ತೆಗೆದುಕೊಂಡ ಅವಲಂಬಿತ ಹಾಗೂ ಸ್ವತಂತ್ರ ಅಂಶಗಳನ್ನು ಆಧರಿಸಿ ಉತ್ತಮ ಸಾಧನೆಯಲ್ಲಿರುವ ಪ್ರತಿ ಹಾಗೂ ಎಲ್ಲಾ ಸಾಮರ್ಥ್ಯಗಳ ಸಾಧನೆಯಲ್ಲಿಯ ವ್ಯತ್ಯಾಸಗಳನ್ನು ತಿಳಿಯಲು ಪರೀಕ್ಷೆಯನ್ನು ಬಳಸಲಾಗಿದೆ.

ಜಿ - ಪರೀಕ್ಷೆಗೆ (Z-Test) ಬಳಸಿದ ಸೂತ್ರವನ್ನು ಫರ್ಗೂಸನ್-೧೯೭೬ ಪುಟ ೭೪ ತೆಗೆದುಕೊಳ್ಳಲಾಗಿದೆ. ಇದರಿಂದ ಜಿ ಅನುಪಾತವನ್ನು ಕಂಡುಹಿಡಿಯಲಾಗಿದೆ.

$$Z = \frac{P_1 - P_2}{S_{P1 - P2}}$$

$$S_{P1 - P2} = P.Q \left( \frac{1}{N_1} + \frac{1}{N_2} \right)$$

ಇಲ್ಲಿ, $P_1$ ಮತ್ತು $P_2$ಗಳು ಎರಡು ಗುಂಪುಗಳ ಸಾಧನೆಯ ಭಾಗಗಳಾಗಿವೆ.

Pಯು ಎರಡು ಗುಂಪುಗಳ ಮಿಲನದ ಸಾಧನೆಯ ಭಾಗವಾಗಿದೆ.[೨]

$Q = 1 - P$

ವಿವರಣಾತ್ಮಕ ವಿಶ್ಲೇಷಣೆಯನ್ನು ಮುಂದಿನ ಅಧ್ಯಾಯದಲ್ಲಿ ಪ್ರಸ್ತುತಪಡಿಸಲಾಗಿದೆ.

### ಆಧಾರ ಗ್ರಂಥಗಳು


೧. ......Minimum Levels of Learning at Primary Stage', NCERT, New Delhi, 1991.

೨. Ferguson C.A., Statistical Analysis in Psychology and Education 1976, P. 74.

## ಅಧ್ಯಾಯ - ೪

# ದತ್ತಾಂಶಗಳ ವಿಶ್ಲೇಷಣೆ ಮತ್ತು ಅರ್ಥೈಸುವಿಕೆ

೪. ೧ ಪ್ರಸ್ತಾವನೆ

೪. ೨ ಉತ್ತಮ ಸಾಧನೆಯ ಭಾಗದ ವಿಶ್ಲೇಷಣೆ

೪. ೩ ಪೂರ್ವ ಸಿದ್ಧಾಂತಗಳ ಪರೀಕ್ಷೆ

೪. ೪ ಸಾಮರ್ಥ್ಯಗಳ ಸಾಧನೆಯ ಭಾಗವನ್ನು ಹೋಲಿಸುವುದು

# ದತ್ತಾಂಶಗಳ ವಿಶ್ಲೇಷಣೆ ಮತ್ತು ಅರ್ಥೈಸುವಿಕೆ

## ೪. ೧ ಪ್ರಸ್ತಾವನೆ

ಈ ಅಧ್ಯಾಯದಲ್ಲಿ ಸಂಗ್ರಹಿಸಿದ ಮಾಹಿತಿಯನ್ನು ವಿವರವಾಗಿ ವಿಶ್ಲೇಷಣೆ ಮಾಡಲಾಗಿದೆ. ಸಂಗ್ರಹಿಸಿದ ಮಾಹಿತಿಯನ್ನು ಪೂರ್ವ ಸಿದ್ಧಾಂತಗಳ ಮೂಲಕ ತುಲನಾತ್ಮಕವಾಗಿ ವಿಶ್ಲೇಷಿಸಲಾಗಿದೆ. ವೀಕ್ಷಿಸಿದ ಮಾಹಿತಿಯ ಭಾಗವು ಪ್ರತಿ ಹಾಗೂ ಎಲ್ಲಾ ಸಾಮರ್ಥ್ಯಗಳನ್ನು ತೃಪ್ತಿಕರವಾಗಿ ಈಡೇರಿಸಿದೆಯೋ ಇಲ್ಲವೊ ಎಂಬುದರ ಆಧಾರದ ಮೇಲೆ ಪೂರ್ವ ಸಿದ್ಧಾಂತಗಳನ್ನು ಸ್ವೀಕರಿಸುವುದು ನಿರ್ಧರಿಸಲಾಗುತ್ತದೆ.

## ೪. ೨. ಉತ್ತಮ ಸಾಧನೆಯ ಭಾಗದ ವಿಶ್ಲೇಷಣೆ

ಪರಿಸರ ಅಧ್ಯಯನ (ವಿಜ್ಞಾನ) ವಿಷಯವನ್ನು ಓದುತ್ತಿರುವ ಬೇಡ ಸಮುದಾಯದ ಮಕ್ಕಳು ಕಲಿಕಾ ಕನಿಷ್ಠ ಹಂತಗಳ ಮೌಲ್ಯಮಾಪನವನ್ನು ಪ್ರತಿ ಹಾಗೂ ಎಲ್ಲಾ ಸಾಮರ್ಥ್ಯಗಳಲ್ಲಿಯ ಸಾಧನೆಯ ವಿವರವಾದ ವಿಶ್ಲೇಷಣೆಯನ್ನು ಮಾಡಲಾಗಿದೆ. ಇದಕ್ಕಾಗಿ ಆಯ್ದ ಹತ್ತು ಸಾಮರ್ಥ್ಯಗಳಲ್ಲಿ ಪ್ರತಿ ಸಾಮರ್ಥ್ಯದ ಸಾಧನೆಯನ್ನು ಎಲ್ಲಾ ಸಾಮರ್ಥ್ಯಗಳ ಸಾಧನೆಯ (೮ ಅಥವಾ ಹೆಚ್ಚು ಸಾಮರ್ಥ್ಯಗಳನ್ನು ಸಾಧಿಸಿದವರು) ಗುಂಪಿನೊಂದಿಗೆ ಹೋಲಿಕೆ ಮಾಡಲಾಗಿದೆ.

ಪರಿಸರ ಅಧ್ಯಯನ (ವಿಜ್ಞಾನ) ವಿಷಯವನ್ನು ಬೋಧಿಸುವ ಬೇಡ ಸಮುದಾಯದ ಶಿಕ್ಷಕರು ಕಲಿಕಾ ಕನಿಷ್ಠ ಹಂತಗಳ ಮೌಲ್ಯಮಾಪನವನ್ನು ಮಾಡಲಾಗಿದೆ. ಪ್ರತಿ ಹಾಗೂ ಎಲ್ಲಾ ಸಾಮರ್ಥ್ಯಗಳ ಸಾಧನೆಯನ್ನು ಪ್ರತಿಗುಂಪಿಗೆ ಹೋಲಿಕೆ ಮಾಡಲಾಗಿದೆ.

ಆಯ್ದ ಸಮುದಾಯವು ಹೆಚ್ಚಿನ ಸಂಖ್ಯೆಯಲ್ಲಿರುವುದರಿಂದ ದ್ವಿಮಾನ ಪರೀಕ್ಷೆಯನ್ನು ಪ್ರತಿ ಹಾಗೂ ಎಲ್ಲಾ ಸಾಮರ್ಥ್ಯಗಳ ಉತ್ತಮ ಸಾಧನೆಯ ಭಾಗವನ್ನು ಕಂಡು ಹಿಡಿಯಲು ಬಳಸಲಾಗಿದೆ. ಇದನ್ನು ಆಯ್ದ ಶಾಲೆಗಳಲ್ಲಿ ಓದುತ್ತಿರುವ ಬೇಡ ಸಮುದಾಯ ಮಕ್ಕಳು ಹಾಗೂ ಬೋಧಿಸುವ ಬೇಡ ಸಮುದಾಯದ ಶಿಕ್ಷಕರನ್ನು ವ್ಯವಸ್ಥಿತ

ವಿಧಾನದಿಂದ ಆಯ್ದು ಕೊಳ್ಳಲಾಗಿದ್ದು, ಸಾಮರ್ಥ್ಯಗಳ ಸಾಧನೆಯ ಆಧಾರದ ಮೇಲೆ ಸಾಧಕರು ಅಥವಾ ಬಾಧಕರು ಎಂದು ಹೆಸರಿಸಲಾಗುವುದು. ಪೂರ್ವಯೋಜನೆಯಂತೆ ಪ್ರತಿ ವಿದ್ಯಾರ್ಥಿ ಹಾಗೂ ಶಿಕ್ಷಕರ ಸಾಮರ್ಥ್ಯಗಳ ಸಾಧನೆಯು ಸ್ವತಂತ್ರವಾಗಿದೆ ಎಂದು ನಿರ್ಧರಿಸಲಾಗುವುದು.

### ೪. ೩. ಪೂರ್ವ ಸಿದ್ಧಾಂತಗಳ ಪರೀಕ್ಷೆ

**ಪೂರ್ವ ಸಿದ್ಧಾಂತ ೧ :** ನಗರ ಮತ್ತು ಗ್ರಾಮೀಣ ಪ್ರದೇಶದಲ್ಲಿ ಓದುತ್ತಿರುವ ಬೇಡ ಸಮುದಾಯದ ವಿದ್ಯಾರ್ಥಿಗಳು ಪರಿಸರ ಅಧ್ಯಯನ (ವಿಜ್ಞಾನ) ವಿಷಯದಲ್ಲಿ ಅಳವಡಿಸಿದ ಪ್ರತಿಯೊಂದು ಹಾಗೂ ಎಲ್ಲಾ ಸಾಮರ್ಥ್ಯಗಳನ್ನು ಸಮರ್ಪಕವಾಗಿ ಸಾಧಿಸುತ್ತಾರೆ.

ಆದ್ದರಿಂದ H೦ : P>೦.೮೦ (P ಎನ್ನುವುದು ಉತ್ತಮ ಸಾಧಕರ ಭಾಗ)

H೧ : P< ೦.೮೦

ಶೂನ್ಯ ಪೂರ್ವಸಿದ್ಧಾಂತವನ್ನು ಈ ರೀತಿ ಪರೀಕ್ಷಿಸಲಾಗಿದೆ. ದ್ವಿಮಾನ ಪದ್ಧತಿಯ P=೦.೮೦ ಮೂಲಮಾನವಾಗಿ ಇಟ್ಟುಕೊಂಡು ನಗರ ವಿದ್ಯಾರ್ಥಿಗಳ ಸಂಖ್ಯೆ ೧೨೦೦ನ್ನು ಮತ್ತು ಗ್ರಾಮೀಣ ವಿದ್ಯಾರ್ಥಿಗಳ ಸಂಖ್ಯೆ ೨೮೦೦ನ್ನು ಆಯ್ದುಕೊಳ್ಳಲಾಗಿದೆ. ಇದರ ಮೂಲಕ ಅತಿ ಉತ್ತಮ ಸಾಧಕರ ಭಾಗವನ್ನು ಕಂಡುಹಿಡಿಯಲಾಗಿದೆ. ಅದೇ ರೀತಿ ನಗರ ಪ್ರದೇಶದ ಶಿಕ್ಷಕರ ಸಂಖ್ಯೆ ೪೦ನ್ನು ಮತ್ತು ಗ್ರಾಮೀಣ ಪ್ರದೇಶದ ಶಿಕ್ಷಕರ ಸಂಖ್ಯೆ ೧೬೦ನ್ನು ಪರೀಕ್ಷೆಗೆ ಒಳಪಡಿಸಲಾಗಿದೆ. ಸಾಮನ್ಯ ವಿವರಣಾ ಪಟ್ಟಿಯನ್ನು ವೀಕ್ಷಿಸಿದಾಗ ಕ್ಷೀಣಿಸಿದ ಗಾತ್ರ ೦.೦೫ ಇದು ಗಮನಿಸಿದ ಸಾಧನೆಯ ಭಾಗದ ೦.೭೪ರಷ್ಟು ನಗರ ಪ್ರದೇಶದ ಮಕ್ಕಳಲ್ಲಿ ೧೨೦೦ ಹಾಗೂ ೦.೭೫ರಷ್ಟು ನಗರ ಪ್ರದೇಶದ ೪೦ ಶಿಕ್ಷಕರಲ್ಲಿ ಕಡಿಮೆಯಾಗಿರುವುದು ಕಂಡು ಬಂದಿದೆ.

ಈ ಅಂಶವನ್ನು ಕೆಳಗಿನ ಸೂತ್ರದ ಸಹಾಯದಿಂದ ಲೆಕ್ಕಾಚಾರ ಮಾಡಲಾಗಿದೆ.

$$P^* = ೧.೬೪೫ \sqrt{P^*q^*/n}$$

ಇಲ್ಲಿ $P^*$ ಎನ್ನುವುದು ಅಳತೆ ಮಾಪನದ ಮೌಲ್ಯ

$q^*=1-P^*$

n = ಆಯ್ದ ಸಮುದಾಯದ ಗಾತ್ರ

ಹಾಗೆಯೇ ಗ್ರಾಮೀಣ ಮಕ್ಕಳು ೨೮೦೦ ಹಾಗೂ $P^*$=೦.೮೦ಕ್ಕೆ ಮತ್ತು ಗ್ರಾಮೀಣ ಶಿಕ್ಷಕರು ೧೬೦ ಹಾಗೂ $P^*$=೦.೮೦ ರಿಂದ ಗಮನಿಸಿದ ಸಾಧನೆಯ ಭಾಗವು ಕ್ರಮವಾಗಿ ೦.೭೫ (೨೮೦೦) ಮತ್ತು ೦.೭೬(೧೬೦)ರಷ್ಟು ಕಡಿಮೆ ಯಾಗಿದೆ.

ಆದ್ದರಿಂದ ಶೂನ್ಯ ಪೂರ್ವ ಸಿದ್ಧಾಂತದ ಪರೀಕ್ಷಾ ಕ್ರಮದಿಂದ ವೀಕ್ಷಿಸಿದ ಸಾಧನೆಯ ಭಾಗವು ಕ್ರಮವಾಗಿ ೦.೭೪, ೦.೭೫ ಮತ್ತು ೦.೭೫, ೦.೭೬ ಮಕ್ಕಳು ಹಾಗೂ ಶಿಕ್ಷಕರ ನಗರ ಹಾಗೂ ಗ್ರಾಮೀಣ ಪ್ರದೇಶದಲ್ಲಿ ವ್ಯತ್ಯಾಸಗಳಿರುವುದರಿಂದ ಈ ಸಿದ್ಧಾಂತವನ್ನು ಪುರಸ್ಕರಿಸಲಾಗುವುದಿಲ್ಲ.

ವಿಶ್ಲೇಷಣೆಯನ್ನು ಮುಂದುವರಿಸಿ ಮಕ್ಕಳ ಹಾಗೂ ಶಿಕ್ಷಕರ ಸಾಮರ್ಥ್ಯಗಳ ಸಾಧನೆಯ ಭಾಗವನ್ನು ಶೇಕಡವಾರಿನಲ್ಲಿ ನಮೂದಿಸುವುದು ಅಂದರೆ ಒದಗಿದ P ಬೆಲೆಯನ್ನು (ಸಾಮರ್ಥ್ಯಗಳ ಸಾಧನೆಯ ಭಾಗ) $P^*$(ಅಳತೆಮಾಪನ)ಯನ್ನು ಈ ಪೂರ್ವಸಿದ್ಧಾಂತಕ್ಕೆ ಹೋಲಿಸಲಾಗಿದೆ.

$$Ho : P > P^*$$

ಆದ್ದರಿಂದ ಶೂನ್ಯ ಪೂರ್ವಸಿದ್ಧಾಂತದಿಂದ ಬಂದ ಬೆಲೆಯನ್ನು ತೃಪ್ತಿಕರ ಸಾಧನೆಯ ಭಾಗವೆಂದು ಕರೆಯಲಾಗುವುದು.

ಈ ಅಂಶವನ್ನು ಪುಷ್ಟೀಕರಿಸಲು ಕೆಳಗಿನ ಸೂತ್ರವನ್ನು ಉಪಯೋಗಿಸಲಾಗಿದೆ.

$$P + 1.96 \sqrt{Pq / n}$$

ಇಲ್ಲಿ P ಯು ಸಾಮರ್ಥ್ಯಗಳ ಸಾಧನೆಯ ಭಾಗ.

$q = 1- P$

n = ಆಯ್ಕೆ ಮಾಡಿದ ಸಂಖ್ಯೆ.

ಪರಿಸರ ಅಧ್ಯಯನ (ವಿಜ್ಞಾನ) ವಿಷಯದಲ್ಲಿ ಅಳವಡಿಸಿದ ಪ್ರತಿಯೊಂದು ಹಾಗೂ ಎಲ್ಲಾ ಸಾಮರ್ಥ್ಯಗಳ ತೃಪ್ತಿಕರ ಸಾಧನೆಯ ಭಾಗ ಮತ್ತು ವರ್ಗಾಂತರವನ್ನು ನಗರ ಮತ್ತು ಗ್ರಾಮೀಣ ಪ್ರದೇಶದಲ್ಲಿ ಓದುತ್ತಿರುವ ಮಕ್ಕಳು ಮತ್ತು ಶಿಕ್ಷಕರ ಪಟ್ಟಿಯನ್ನು ಕೋಷ್ಟಕ ೪ ಮತ್ತು ೫ ರಲ್ಲಿ ನಮೂದಿಸಲಾಗಿದೆ.

**ಕೋಷ್ಟಕ : ೪**

ನಗರ ಮತ್ತು ಗ್ರಾಮೀಣ ಪ್ರದೇಶದ ಶಾಲೆಗಳಲ್ಲಿ ಓದುತ್ತಿರುವ ಮಕ್ಕಳು ಪರಿಸರ ಅಧ್ಯಯನ (ವಿಜ್ಞಾನ) ವಿಷಯದಲ್ಲಿ ಅಳವಡಿಸಿದ ಪ್ರತಿಯೊಂದು ಹಾಗೂ ಎಲ್ಲಾ ಸಾಮರ್ಥ್ಯಗಳ ಸಾಧನೆಯ ಭಾಗ.

| ಸಾಮರ್ಥ್ಯ | ಸಾಧನೆಯ ಭಾಗ | | ತೃಪ್ತಿಕರ ಸಾಧನೆಯ ಭಾಗ | |
|---|---|---|---|---|
| | ನಗರ ಶಾಲೆಮಕ್ಕಳು (ಸಂಖ್ಯೆ=೧೨೦೦) | ಗ್ರಾಮೀಣ ಶಾಲೆಮಕ್ಕಳು (ಸಂಖ್ಯೆ=೨೮೦೦) | ನಗರ ಶಾಲೆಮಕ್ಕಳು | ಗ್ರಾಮೀಣ ಶಾಲೆಮಕ್ಕಳು |
| ೧ | ೩೧೨ (೨೬) | ೫೦೪ (೧೮) | ೦.೩೨ | ೦.೨೩ |
| ೨ | ೩೪೮ (೨೯) | ೫೬೦ (೨೦) | ೦.೩೫ | ೦.೨೫ |
| ೩ | ೩೯೬ (೩೩) | ೭೦೦ (೨೫) | ೦.೩೯ | ೦.೩೦ |
| ೪ | ೮೭೬ (೭೩)* | ೧೭೦೮ (೬೧)* | ೦.೭೯ | ೦.೬೭ |
| ೫ | ೫೦೪ (೪೨) | ೯೫೨ (೩೪) | ೦.೪೮ | ೦.೪೦ |
| ೬ | ೪೮೦ (೪೦) | ೮೬೮(೩೧) | ೦.೪೬ | ೦.೩೭ |
| ೭ | ೬೩೬ (೫೩) | ೧೨೬೦ (೪೫) | ೦.೫೯ | ೦.೫೧ |
| ೮ | ೪೪೪ (೩೭) | ೮೪೦ (೩೦) | ೦.೪೩ | ೦.೩೬ |
| ೯ | ೫೨೮ (೪೪) | ೧೦೩೬ (೩೭) | ೦.೫೦ | ೦.೪೩ |
| ೧೦ | ೭೯೬ (೫೮) | ೧೩೭೨ (೪೯) | ೦.೬೪ | ೦.೫೫ |
| ಒಟ್ಟು | ೦(೦೦) | ೦(೦೦) | ೦(೦೦) | ೦(೦೦) |

ಆವರಣದಲ್ಲಿರುವ ಸಂಖ್ಯೆಗಳು ಸಾಧಕರ ಶೇಕಡವನ್ನು ತಿಳಿಸುತ್ತದೆ.

* ೦.೦೫ ತೃಪ್ತಿಕರ ಸಾಧನೆಯ ಮಟ್ಟವಾಗಿದೆ.

ಮೇಲಿನ ಕೋಷ್ಟಕದ ಪ್ರಕಾರ ನಗರ ಮತ್ತು ಗ್ರಾಮೀಣ ಪ್ರದೇಶದಲ್ಲಿ ಓದುತ್ತಿರುವ ಮಕ್ಕಳು ಒಬ್ಬರಾದರೂ ಎಲ್ಲಾ ಸಾಮರ್ಥ್ಯಗಳನ್ನು ತೃಪ್ತಿಕರವಾಗಿ ಈಡೇರಿಸಿಲ್ಲ. ಮೊದಲ ೧, ೨ ಸಾಮರ್ಥ್ಯಗಳಾದ ಸಸ್ಯಗಳ ಉಪಯೋಗ ಹಾಗೂ ಕಾರ್ಯಗಳನ್ನು ನೀರಿನ ವಿವಿಧ ಸ್ಥಿತಿಗಳನ್ನು ಶೇಕಡ ೨೫ರಷ್ಟಕ್ಕಿಂತ ಕಡಿಮೆ ಗ್ರಾಮೀಣ ಮಕ್ಕಳು ಈಡೇರಿಸಿ ರುತ್ತಾರೆ. ಇನ್ನುಳಿದ ಸಾಮರ್ಥ್ಯಗಳಾದ ೩, ೫, ೬, ೭, ೮, ೯ ಮತ್ತು ೧೦ ವಸ್ತುವಿನ ವಿವಿಧ ಸ್ಥಿತಿಗಳ, ಪ್ರಾಣಿ ಹಾಗೂ ಸಸ್ಯ ಉತ್ಪನ್ನಗಳ ವರ್ಗೀಕರಣ, ನೀರಿನ ಶುದ್ಧೀಕರಣ, ಸಮತೋಲನ ಆಹಾರದ ಪ್ರಾಮುಖ್ಯತೆ ತರಕಾರಿಗಳ ಸಂಸ್ಕರಣೆ ಮತ್ತು ಉತ್ತಮ ಆರೋಗ್ಯವನ್ನು ಒಳಗೊಂಡ ಸಾಮರ್ಥ್ಯಗಳ ಸಾಧನೆಯು ಶೇಕಡ ೫೦ಕ್ಕಿಂತ ಕಡಿಮೆಯಾಗಿದೆ. ಕೇವಲ ಒಂದೇ ಒಂದು ಸಾಮರ್ಥ್ಯವಾದ ವಿವಿಧ ಬಗೆಯ ವಸ್ತುಗಳ ರುಚಿಗಳನ್ನು ಗುರುತಿಸುವುದು ಶೇಕಡ ೬೧ ರಷ್ಟು ಈಡೇರಿಸಿದ್ದಾರೆ. ಹಾಗೆಯೇ ೪, ೭ ಮತ್ತು ೧೦ ವಿವಿಧ ವಸ್ತುಗಳ ರುಚಿಗಳು, ತಾಪಮಾನಕ್ಕೆ ತಕ್ಕಂತೆ ವಸ್ತುಗಳ ಸ್ಥಿತಿಗಳಲ್ಲಾಗುವ ಬದಲಾವಣೆ ಮತ್ತು ಉತ್ತಮ ಆರೋಗ್ಯದ ಬಗ್ಗೆ ಅರಿವು ಮೂಡಿಸುವುದು, ಸಾಮರ್ಥ್ಯಗಳನ್ನು ಶೇಕಡ ೫೦ಕ್ಕಿಂತ ಹೆಚ್ಚು ನಗರ ಪ್ರದೇಶದ ಶಾಲಾಮಕ್ಕಳು ಈಡೇರಿಸಿದ್ದಾರೆ.

ಇದರ ಅನ್ವಯ ಪೂರ್ವಸಿದ್ಧಾಂತವಾದ ಪ್ರತಿ ಹಾಗೂ ಎಲ್ಲಾ ಸಾಮರ್ಥ್ಯಗಳ ಸಾಧನೆಯ ಭಾಗವು ಶೇಕಡ ೫ರ ಮಟ್ಟದಲ್ಲಿ ೦.೮ಂಕ್ಕೆ ಹೆಚ್ಚು ಅಥವಾ ಸಮವಾಗಿಲ್ಲದ ಕಾರಣ ನಿರ್ಲಕ್ಷಿಸಲಾಗುವುದು. ಇಲ್ಲಿ ಗಮನಿಸಿದ ಅಂಶವೆಂದರೆ ನಗರ ಹಾಗೂ ಗ್ರಾಮೀಣ ಪ್ರದೇಶಗಳ ಶಾಲೆಗಳೆರಡರಲ್ಲಿ ಓದುತ್ತಿರುವ ಮಕ್ಕಳು ಪ್ರತಿ ಹಾಗೂ ಎಲ್ಲಾ ಸಾಮರ್ಥ್ಯ ಗಳಲ್ಲಿಯ ಸಾಧನೆಯು ತೃಪ್ತಿಕರ ಸಾಧನೆಯಾಗಿರುವುದು ಕಂಡುಬಂದಿಲ್ಲ. ಇದರ ಫಲಿತಾಂಶವು ನಗರ ಹಾಗೂ ಗ್ರಾಮೀಣ ಎಲ್ಲಾ ಸರಕಾರಿ ಮತ್ತು ಖಾಸಗಿ ಶಾಲೆಗಳು ಗೊತ್ತುಪಡಿಸಿ ಕಲಿಕಾ ಕನಿಷ್ಠ ಹಂತಗಳ ಮಹತ್ವವನ್ನು ಸಾಧಿಸಿಲ್ಲ.

ಎರಡು ಗುಂಪುಗಳಲ್ಲಿಯ ಪ್ರತಿ ಸಾಮರ್ಥ್ಯಗಳ ಶೇಕಡ ಸಾಧನೆಯನ್ನು ನಕ್ಷೆ ೧ರಲ್ಲಿ ಪ್ರಸ್ತುತ ಪಡಿಸಲಾಗಿದೆ.

ನಕ್ಷೆ ೧. ನಗರ ಮತ್ತು ಗ್ರಾಮೀಣ ಶಾಲೆಗಳ ಶೇಕಡವಾರು ಸಾಮರ್ಥ್ಯಗಳ ಸಾಧನೆಯ ಭಾಗ



**ಪೂರ್ವ ಸಿದ್ಧಾಂತ ೨ :** ಸರ್ಕಾರಿ ಮತ್ತು ಖಾಸಗಿ ಶಾಲೆಗಳಲ್ಲಿ ಓದುತ್ತಿರುವ ಮಕ್ಕಳ ಗಣನೀಯ ಭಾಗವು ಪರಿಸರ ಅಧ್ಯಯನ (ವಿಜ್ಞಾನ) ವಿಷಯದಲ್ಲಿಯ ಪ್ರತಿಯೊಂದು ಸಾಮರ್ಥ್ಯಗಳಲ್ಲಿ ತೃಪ್ತಿಕರ ಸಾಧನೆ ಮಾಡುವರು.

**ಕೋಷ್ಟಕ :** ೫

ಗ್ರಾಮೀಣ ಪ್ರದೇಶದ ಸರಕಾರಿ ಮತ್ತು ಖಾಸಗಿ ಶಾಲೆಗಳಲ್ಲಿ ಓದುತ್ತಿರುವ ಮಕ್ಕಳ ಪ್ರತಿಯೊಂದು ಹಾಗೂ ಎಲ್ಲಾ ಸಾಮರ್ಥ್ಯಗಳ ತೃಪ್ತಿಕರ ಸಾಧನೆಯ ಭಾಗ.

| ಸಾಮರ್ಥ್ಯ | ಗ್ರಾಮೀಣ ಪ್ರದೇಶದ ಸಾಧನೆಯ ಭಾಗ | | ತೃಪ್ತಿಕರ ಸಾಧನೆಯ ಭಾಗ | |
|---|---|---|---|---|
| | ಸರಕಾರಿ (ಸಂಖ್ಯೆ=೧೯೬೦) | ಖಾಸಗಿ (ಸಂಖ್ಯೆ=೮೪೦) | ಸರಕಾರಿ | ಖಾಸಗಿ |
| ೧ | ೧೭೬ (೦೯) | ೭೬(೦೯) | ೦.೧೩ | ೦.೧೮ |
| ೨ | ೨೭೪ (೧೪) | ೧೦೯ (೧೩) | ೦.೧೯ | ೦.೨೦ |
| ೩ | ೭೬೪ (೩೯) | ೨೭೭ (೩೩) | ೦.೪೬ | ೦.೪೩ |
| ೪ | ೧೧೫೬ (೫೯) | ೪೧೨ (೪೯) | ೦.೬೬ | ೦.೬೦ |
| ೫ | ೧೦೯೮ (೫೬) | ೪೦೩ (೪೮) | ೦.೬೩ | ೦.೫೮ |
| ೬ | ೭೨೫ (೩೭ ) | ೨೪೪ (೨೯) | ೦.೪೪ | ೦.೩೯ |
| ೭ | ೭೬೪ (೩೯) | ೨೮೬ (೩೪) | ೦ ೪೬ | ೦.೪೪ |
| ೮ | ೪೯೦ (೨೫) | ೧೫೧ (೧೮) | ೦.೩೧ | ೦.೨೬ |
| ೯ | ೪೩೧ (೨೨) | ೧೬೮ (೨೦) | ೦.೨೮ | ೦.೨೯ |
| ೧೦ | ೫೮೮ (೩೦) | ೨೦೨ (೨೪) | ೦.೩೭ | ೦.೩೪ |
| ಎಲ್ಲವುಗಳಲ್ಲಿ | ೦(೦೦) | ೦(೦೦) | ೦(೦೦) | ೦(೦೦) |

ಆವರಣದಲ್ಲಿರುವ ಸಂಖ್ಯೆಗಳು ಸಾಧನೆಯ ಶೇಕಡವನ್ನು ತಿಳಿಸುತ್ತದೆ.

* ೦.೦೫ ತೃಪ್ತಿಕರ ಸಾಧನೆಯ ಮಟ್ಟವಾಗಿದೆ.

ಕೋಷ್ಟಕ ೫ರಲ್ಲಿರುವಂತೆ ಗ್ರಾಮೀಣ ಸರ್ಕಾರಿ ಶಾಲೆಗಳಲ್ಲಿ ಓದುತ್ತಿರುವ ಮಕ್ಕಳಲ್ಲಿ ಸಾಮರ್ಥ್ಯಗಳ ಶೇಕಡ ಸಾಧನೆಯು ೦೯ ರಿಂದ ೫೯ರಷ್ಟು ಇದ್ದರೆ ಗ್ರಾಮೀಣ ಖಾಸಗಿ ಶಾಲೆಗಳ ಮಕ್ಕಳಲ್ಲಿಯ ಈ ಸಾಧನೆಯು ಶೇಕಡ ೧೧ ರಿಂದ ೪೯ರಷ್ಟು ಆಗಿದೆ. ಗ್ರಾಮೀಣ ಖಾಸಗಿ ಶಾಲೆಗಳಲ್ಲಿಯ ಮಕ್ಕಳ ಒಟ್ಟಾರೆ ಸಾಧನೆಯು ಶೂನ್ಯವಾಗಿದೆ. ಗ್ರಾಮೀಣ ಖಾಸಗಿ ಶಾಲೆಗಳ ಮಕ್ಕಳ ೪ ಸಾಮರ್ಥ್ಯಗಳ ಸಾಧನೆಯು ಶೂನ್ಯವಾಗಿದ್ದರೆ, ಒಂದೇ ಒಂದು ಸಾಮರ್ಥ್ಯದ ಸಾಧನೆಯು ಸರ್ಕಾರಿ ಶಾಲೆಗಳ ಮಕ್ಕಳಿಂದ ಈಡೇರಿಸಲಾಗಿದೆ. ಈ ಸಾಧನೆಯು ಪ್ರಸ್ತುತ ಚಾಲನೆಯಲ್ಲಿರುವ ಹೇಳಿಕೆಯಾದ ಖಾಸಗಿ ಶಾಲೆಗಳು ಸರ್ಕಾರಿ ಶಾಲೆಗಳ ಬೋಧನೆಗಿಂತ ಉತ್ತಮ ಬೋಧನೆ ನೀಡಬಲ್ಲವು ಎಂಬ ಹೇಳಿಕೆಯನ್ನು ಹುಸಿ ಮಾಡಿದಂತಾಗಿದೆ. ಈ ಫಲಿತಾಂಶವು ಗ್ರಾಮೀಣ ಕನ್ನಡ ಸರ್ಕಾರಿ ಶಾಲೆಗೆ ಸೀಮಿತವಾಗಿದ್ದು, ಇನ್ನುಳಿದ ಗ್ರಾಮೀಣ ಖಾಸಗಿ ಅಥವಾ ಸರ್ಕಾರಿ ಶಾಲೆಗಳಲ್ಲಿ ಓದುತ್ತಿರುವ ಮಕ್ಕಳು ಪರಿಸರ ಅಧ್ಯಯನ (ವಿಜ್ಞಾನ) ವಿಷಯ ಎಲ್ಲಾ ಸಾಮರ್ಥ್ಯಗಳ ಸಾಧನೆಯಲ್ಲಿ ಒಬ್ಬ ವಿದ್ಯಾರ್ಥಿಯೂ ತೃಪ್ತಿಕರ ಸಾಧನೆಯನ್ನು ಸಾದಿಸಿಲ್ಲವೆಂದು ತಿಳಿದುಬಂದಿದೆ.

ಗ್ರಾಮೀಣ ಪ್ರದೇಶದ ಸರಕಾರಿ ಮತ್ತು ಖಾಸಗಿ ಶಾಲೆಯ ಮಕ್ಕಳು ಪ್ರತಿಯೊಂದು ಹಾಗೂ ಎಲ್ಲಾ ಸಾಮರ್ಥ್ಯಗಳ ಸಾಧನೆಯು ಅಪೇಕ್ಷಿಸಿದ ಭಾಗಕ್ಕೆ ೦.೮೬ (೧೯೬೦) ಮತ್ತು ೦.೮೪ (೮೪೦) ತೃಪ್ತಿಕರ ಸಾಧನೆಯ ಮಟ್ಟ ೦.೦೫ವಾಗಿರುವುದಕ್ಕಿಂತ ಕಡಿಮೆಯಾಗಿದೆ. ಇದು ಗ್ರಾಮೀಣ ಪ್ರದೇಶದ ಸರಕಾರಿ ಮತ್ತು ಖಾಸಗಿ ಶಾಲೆಗಳಲ್ಲಿ ಓದುತ್ತಿರುವ ಮಕ್ಕಳು ಎಲ್ಲಾ ಸಾಮರ್ಥ್ಯಗಳ ತೃಪ್ತಿಕರ ಸಾಧನೆ ಮಹತ್ವ ೦.೦೫ನ್ನು ಸಾಧಿಸಿಲ್ಲವೆಂದು ಕಂಡುಬರುತ್ತದೆ. ಇದರ ಅನ್ವಯ ಎಲ್ಲಾ ಗ್ರಾಮೀಣ ಸರಕಾರಿ ಮತ್ತು ಖಾಸಗಿ ಶಾಲೆಗಳು ಕಲಿಕಾ ಕನಿಷ್ಠ ಹಂತಗಳ ಸಾಧನೆಯನ್ನು ಸಾಧಿಸಿಲ್ಲವೆಂದು ತಿಳಿದು ಬರುತ್ತದೆ.

ಗ್ರಾಮೀಣ ಸರಕಾರಿ ಮತ್ತು ಖಾಸಗಿ ಶಾಲೆಗಳ ಪ್ರತಿ ಸಾಮರ್ಥ್ಯಗಳ ಸಾಧನೆಯ ಶೇಕಡವಾರು ರೇಖಾ ಚಿತ್ರವನ್ನು ನಕ್ಷೆ ೨ರಲ್ಲಿ ಕಾಣಬಹುದು.

ನಕ್ಷೆ ೨. ಗ್ರಾಮಿಣ ಸರ್ಕಾರಿ ಮತ್ತು ಖಾಸಗಿ ಶಾಲೆಗಳ ಶೇಕಡವಾರು ಸಾಮರ್ಥ್ಯಗಳ ಸಾಧನೆಯ ಭಾಗ



**ಕೋಷ್ಟಕ : ೬**

ನಗರ ಪ್ರದೇಶದಲ್ಲಿಯ ಸರಕಾರಿ ಮತ್ತು ಖಾಸಗಿ ಶಾಲೆಗಳಲ್ಲಿ ಓದುತ್ತಿರುವ ಮಕ್ಕಳ ಪ್ರತಿಯೊಂದು ಸಾಮರ್ಥ್ಯಗಳ ತೃಪ್ತಿಕರ ಸಾಧನೆಯ ಭಾಗ.

| **ಸಾಮರ್ಥ್ಯ** | **ಗ್ರಾಮೀಣ ಪ್ರದೇಶದ ಸಾಧನೆಯ ಭಾಗ** | | **ತೃಪ್ತಿಕರ ಸಾಧನೆಯ ಭಾಗ** | |
|---|---|---|---|---|
| | **ಸರಕಾರಿ** (ಸಂಖ್ಯೆ=೧೯೬೦) | **ಖಾಸಗಿ** (ಸಂಖ್ಯೆ=೮೪೦) | **ಸರಕಾರಿ** | **ಖಾಸಗಿ** |
| ೧ | ೭೬ (೦೯) | ೨೯ (೦೮) | ೦.೩೪ | ೦.೧೨ |
| ೨ | ೧೩೪ (೧೬) | ೫೮ (೧೬) | ೦.೨೨ | ೦.೨೩ |
| ೩ | ೪೦೩ (೪೮) | ೧೪೬ (೪೧) | ೦.೫೬ | ೦.೪೯ |
| ೪ | ೫೮೮ (೭೦)* | ೨೪೧ (೬೭) | ೦.೭೭ | ೦.೭೪ |
| ೫ | ೫೬೩ (೬೭) | ೨೦೫ (೫೭) | ೦.೭೪ | ೦.೬೮ |
| ೬ | ೨೯೪ (೩೫) | ೧೦೮ (೩೦) | ೦.೪೨ | ೦.೪೦ |
| ೭ | ೩೩೬ (೪೦) | ೧೪೦ (೩೯) | ೦.೪೮ | ೦.೫೦ |
| ೮ | ೨೨೭ (೨೭) | ೬೫ (೧೮) | ೦.೩೦ | ೦.೨೬ |
| ೯ | ೧೪೩ (೧೭) | ೫೪ (೧೫) | ೦.೨೩ | ೦.೨೩ |
| ೧೦ | ೨೧೮ (೨೬) | ೮೬ (೨೪) | ೦.೩೩ | ೦.೩೩ |
| ಎಲ್ಲವುಗಳಲ್ಲಿ | ೦(೦೦) | ೦(೦೦) | ೦(೦೦) | ೦(೦೦) |

* ೦.೦೫ ತೃಪ್ತಿಕರ ಸಾಧನೆಯ ಮಟ್ಟ.

ಆವರಣದಲ್ಲಿರುವ ಸಂಖ್ಯೆಗಳು ಸಾಧಕರ ಶೇಕಡವನ್ನು ತಿಳಿಸುತ್ತದೆ.

ಕೋಷ್ಟಕ ೬೭ರ ಪ್ರಕಾರ ಶೇಕಡವಾರು ಸಾಧನೆಯ ವರ್ಗಾಂತರವು ೦೯ ರಿಂದ ೭೦ರವರೆಗೆ ನಗರ ಸರಕಾರಿ ಶಾಲೆಗಳಿಂದ ಕಂಡುಬಂದರೆ ಶೇಕಡ ವರ್ಗಾಂತರವು ೦೮ ರಿಂದ ೬೭ರವರೆಗೆ ನಗರ ಖಾಸಗಿ ಶಾಲೆಗಳಿಂದ ಕಂಡುಬಂದಿದೆ. ಖಾಸಗಿ ಶಾಲೆಗಳ ಒಟ್ಟು ಸಾಧನೆಯು ಶೂನ್ಯವಾಗಿದೆ. ಖಾಸಗಿ ಶಾಲೆಗಳ ಗರಿಷ್ಟ ಸಾಧನೆಯನ್ನು ಕೇವಲ ನಾಲ್ಕನೇ ಸಾಮರ್ಥ್ಯ ಒಂದರಲ್ಲಿ ಕಾಣಬಹುದಾಗಿದ್ದು, ಉಳಿದ ಯಾವುದೇ ನಾಲ್ಕು ಸಾಮರ್ಥ್ಯಗಳನ್ನು ಸರಕಾರಿ ಶಾಲೆಗಳೊಂದಿಗೆ ಹೋಲಿಸಿದಾಗ ಎರಡು ಸಾಮರ್ಥ್ಯಗಳ ಸಾಧನೆಯನ್ನು ಸರಕಾರಿ ಶಾಲೆಗಳ ಮಕ್ಕಳು ಈಡೇರಿಸಿರುವುದು ಕಂಡುಬಂದಿದೆ. ಇದರಿಂದ ಸಾರ್ವತ್ರಿಕ ಹೇಳಿಕೆಯಾದ ಖಾಸಗಿ ಶಾಲೆಗಳು ಸರ್ಕಾರಿ ಶಾಲೆಗಳ ಶಿಕ್ಷಣಕ್ಕಿಂತ ಉತ್ತಮ ಶಿಕ್ಷಣ ನೀಡುತ್ತವೆ ಎಂಬುದು ಸುಳ್ಳೆಂದು ಸಾಬೀತಾಗಿದೆ. ಈ ಅಂಶವು ಸರಕಾರಿ ಕನ್ನಡ ಮಾಧ್ಯಮ ಶಾಲೆಗಳಿಗೆ ಸೀಮಿತವಾಗಿದೆ. ಒಟ್ಟಾರೆ ಯಾವುದೇ ನಗರ ಪ್ರದೇಶದ ಸರ್ಕಾರಿ ಹಾಗೂ ಖಾಸಗಿ ಶಾಲೆಗಳಲ್ಲಿ ಓದುತ್ತಿರುವ ಮಗು ಪರಿಸರ ಅಧ್ಯಯನ (ವಿಜ್ಞಾನ) ವಿಷಯದಲ್ಲಿ ಅಳವಡಿಸಿದ ಎಲ್ಲಾ ಸಾಮರ್ಥ್ಯಗಳ ಸಾಧನೆಯನ್ನು ಈಡೇರಿಸಿಲ್ಲ.

ಕೋಷ್ಟಕ ೬೭ರಲ್ಲಿರುವಂತೆ ೦.೦೫ ತೃಪ್ತಿಕರವಾಗಿ ಸಾಧನೆ ಮಟ್ಟಕ್ಕೆ ಅನ್ವಹಿಸಿದಂತೆ ನಗರದ ಸರಕಾರಿ ಹಾಗೂ ಖಾಸಗಿ ಶಾಲೆಗಳಲ್ಲಿ ಓದುತ್ತಿರುವ ಎಲ್ಲಾ ಮಕ್ಕಳು ಪ್ರತಿಯೊಂದು ಹಾಗೂ ಎಲ್ಲಾ ಸಾಮರ್ಥ್ಯಗಳ ಸಾಧನಾಮಟ್ಟವು ೦.೭೬ (೮೪೦) ಮತ್ತು ೦.೭೪ (೩೬೦) ಊಹಿಸಿದ ಮಟ್ಟಕ್ಕಿಂತ ಕಡಿಮೆಯಾಗಿದೆ. ಸಾಮರ್ಥ್ಯ ನಾಲ್ಕನ್ನು ಹೊರತುಪಡಿಸಿ ಯಾವುದೇ ನಗರ ಸರ್ಕಾರಿ ಮತ್ತು ಖಾಸಗಿ ಶಾಲೆಗಳಲ್ಲಿ ಓದುತ್ತಿರುವ ಮಗು ಎಲ್ಲಾ ಸಾಮರ್ಥ್ಯಗಳನ್ನು ೦.೦೫ ಸಾಧನೆಯ ಮಟ್ಟಕ್ಕೆ ತೃಪ್ತಿಕರವಾಗಿ ಈಡೇರಿಸಿಲ್ಲ. ಇದರ ಅನ್ವಯ ನಗರ ಸರಕಾರಿ ಮತ್ತು ಖಾಸಗಿ ಶಾಲೆಗಳಲ್ಲಿ ಓದುತ್ತಿರುವ ಮಕ್ಕಳು ಕಲಿಕಾ ಕನಿಷ್ಠ ಹಂತಗಳ ಸಾಧನೆಯಲ್ಲಿ ವಿಫಲರಾಗಿದ್ದಾರೆ.

ನಗರ ಸರಕಾರಿ ಮತ್ತು ಖಾಸಗಿ ಶಾಲೆಗಳು ಪ್ರತಿಯೊಂದು ಸಾಮರ್ಥ್ಯಗಳ ಸಾಧನೆಯ ಶೇಕಡವಾರು ರೇಖಾ ಚಿತ್ರವನ್ನು ನಕ್ಷೆ ೩ರಲ್ಲಿ ಪ್ರಸ್ತುತ ಪಡಿಸಲಾಗಿದೆ.

ನಕ್ಷೆ ೩. ನಗರ ಸರ್ಕಾರಿ ಮತ್ತು ಖಾಸಗಿ ಶಾಲೆಗಳ ಶೇಕಡವಾರು ಸಾಮರ್ಥ್ಯಗಳ ಸಾಧನೆಯ ಭಾಗ

ಅಪೇಕ್ಷಿಸಿದ ಸಾಧನೆಯ ಮಟ್ಟ

100
80
60
40
20
0

ಶೇಕಡ

1 2 3 4 5 6 7 8 9 10

ಸಾಮರ್ಥ್ಯಗಳು

 ಸರ್ಕಾರಿ  ಖಾಸಗಿ

**ಪೂರ್ವ ಸಿದ್ಧಾಂತ ೩ :** ಪರಿಸರ ಅಧ್ಯಯನ (ವಿಜ್ಞಾನ) ವಿಷಯವನ್ನು ಓದುತ್ತಿರುವ ಬೇಡ ಸಮುದಾಯದ ಗಂಡು ಮತ್ತು ಹೆಣ್ಣು ಮಕ್ಕಳು ಅಳವಡಿಸಿದ ಪ್ರತಿಯೊಂದು ಹಾಗೂ ಎಲ್ಲಾ ಸಾಮರ್ಥ್ಯಗಳನ್ನು ತೃಪ್ತಿಕರವಾಗಿ ಸಾಧಿಸಬಲ್ಲರು.

**ಕೋಷ್ಟಕ : ೭**

ಗ್ರಾಮೀಣ ಶಾಲೆಗಳಲ್ಲಿ ಓದುತ್ತಿರುವ ಗಂಡು ಮತ್ತು ಹೆಣ್ಣು ಮಕ್ಕಳ ಪ್ರತಿ ಹಾಗೂ ಎಲ್ಲಾ ಸಾಮರ್ಥ್ಯಗಳ ಸಾಧನೆಯ ಭಾಗ.

| **ಸಾಮರ್ಥ್ಯ** | **ಗ್ರಾಮೀಣ ಶಾಲೆಗಳ ಸಾಧನೆಯ ಭಾಗ** | | **ತೃಪ್ತಿಕರ ಸಾಧನೆಯ ಭಾಗ** | |
|---|---|---|---|---|
| | ಗ್ರಾಮೀಣ ಗಂಡು (ಸಂಖ್ಯೆ=೧೯೬೦) | ಗ್ರಾಮೀಣ ಹೆಣ್ಣು (ಸಂಖ್ಯೆ=೮೪೦) | ಗಂಡು | ಹೆಣ್ಣು |
| ೧ | ೭೬೪ (೩೯) | ೮೪ (೧೦) | ೦.೪೭ | ೦.೧೫ |
| ೨ | ೮೪೩(೪೩) | ೫೯ (೦೭) | ೦.೫೧ | ೦.೧೧ |
| ೩ | ೮೦೪ (೪೧) | ೬೭೧ (೦೮) | ೦.೪೯ | ೦.೧೨ |
| ೪ | ೯೬೦ (೪೯) | ೪೨೦ (೫೦) | ೦.೫೭ | ೦.೫೮ |
| ೫ | ೯೦೨ (೪೬) | ೩೧೯ (೩೮) | ೦.೫೪ | ೦.೪೬ |
| ೬ | ೬೮೬ (೩೫) | ೨೭೭ (೩೩) | ೦.೪೩ | ೦.೪೧ |
| ೭ | ೮೨೩ (೪೨) | ೩೬೧ (೪೩) | ೦.೫೦ | ೦.೫೨ |
| ೮ | ೬೬೬ (೩೪) | ೨೦೨ (೨೪) | ೦.೪೨ | ೦.೩೦ |
| ೯ | ೮೮೨ (೪೫) | ೩೧೧ (೩೭) | ೦.೫೩ | ೦.೪೫ |
| ೧೦ | ೭೮೪ (೪೦) | ೩೪೪ (೪೧) | ೦.೪೮ | ೦.೪೯ |
| ಎಲ್ಲವುಗಳಲ್ಲಿ | ೦(೦೦) | ೦(೦೦) | ೦(೦೦) | ೦(೦೦) |

* ೦.೦೫ ತೃಪ್ತಿಕರ ಸಾಧನೆಯ ಮಟ್ಟ.

ಆವರಣದಲ್ಲಿರುವ ಸಂಖ್ಯೆಗಳು ಶೇಕಡ ಸಾಧನೆಯ ಭಾಗವಾಗಿದೆ.

ಕೋಷ್ಟಕ ೭ರ ಅನ್ವಯ ಯಾವುದೇ ಗ್ರಾಮೀಣ ಗಂಡು ಅಥವಾ ಹೆಣ್ಣುಮಗುವಿನ ಸಾಧನೆಯು ಶೇಕಡ ೫೦ರ ಮಿತಿಯನ್ನು ದಾಟಿಲ್ಲ. ಗ್ರಾಮೀಣ ಹೆಣ್ಣುಮಕ್ಕಳ ೯ ಸಾಮರ್ಥ್ಯಗಳ ಸಾಧನೆಯು ಶೇಕಡ ೧೦ಕ್ಕಿಂತ ಕಡಿಮೆಯಾಗಿರುವುದು ಕಂಡುಬಂದಿದೆ. ಶೇಕಡ ೯೦ರಷ್ಟು ಗ್ರಾಮೀಣ ಹೆಣ್ಣು ಮಕ್ಕಳು ಶೇಕಡ ೭೫ರಷ್ಟು ಸಾಮರ್ಥ್ಯಗಳನ್ನು ಸಾಧಿಸಿಲ್ಲವೆಂಬ ಅಂಶವು ಕಂಡು ಬಂದಿದೆ. ಯಾವುದೇ ಗ್ರಾಮೀಣ ಗಂಡು ಅಥವಾ ಹೆಣ್ಣುಮಗುವು ಎಲ್ಲಾ ಸಾಮರ್ಥ್ಯಗಳ ಸಾಧನೆಗೈಯುವಲ್ಲಿ ವಿಫಲರಾಗಿದ್ದಾರೆ.

ಕೋಷ್ಟಕ ೭ರ ಪ್ರಕಾರ ೦.೦೫ ತೃಪ್ತಿಕರ ಸಾಧನೆಯ ಮಟ್ಟಕ್ಕೆ ಅನ್ವಹಿಸುವಂತೆ ಗಮನಿಸಿದ ಭಾಗವು ಗ್ರಾಮೀಣ ಗಂಡುಮಕ್ಕಳ ಸಾಧನೆಯು ೦.೬೯ (೧೯೬೦) ಮತ್ತು ಹೆಣ್ಣುಮಕ್ಕಳ ಸಾಧನೆಯು ೦.೬೯, (೮೪೦) ರಷ್ಟು ಕಡಿಮೆಯಾಗಿದೆ. ಗ್ರಾಮೀಣ ಪ್ರದೇಶದ ಯಾವುದೇ ಮಗುವು ಪ್ರತಿ ಹಾಗೂ ಎಲ್ಲಾ ಸಾಮರ್ಥ್ಯಗಳ ಸಾಧನೆಯನ್ನು ಸಾಧಿಸುವಲ್ಲಿ ವಿಫಲರಾಗಿದ್ದಾರೆ ಎಂದು ಕಂಡುಬಂದಿದೆ.

ಗ್ರಾಮೀಣ ಗಂಡು ಮತ್ತು ಹೆಣ್ಣು ಮಕ್ಕಳು ಪ್ರತಿಯೊಂದು ಸಾಮರ್ಥ್ಯಗಳ ಶೇಕಡವಾರು ಸಾಧನೆಯನ್ನು ನಕ್ಷೆ ೪ ರಲ್ಲಿ ಪ್ರಸ್ತುತ ಪಡಿಸಲಾಗಿದೆ.

ನಕ್ಷೆ ೪. ಗ್ರಾಮೀಣ ಗಂಡು ಮತ್ತು ಹೆಣ್ಣು ಮಕ್ಕಳ ಶೇಕಡವಾರು ಸಾಮರ್ಥ್ಯಗಳ ಸಾಧನೆಯ ಭಾಗ



**ಕೋಷ್ಟಕ : ೮**

ನಗರ ಶಾಲೆಗಳಲ್ಲಿ ಓದುತ್ತಿರುವ ಗಂಡು ಮತ್ತು ಹೆಣ್ಣುಮಕ್ಕಳ ಪ್ರತಿ ಹಾಗೂ ಎಲ್ಲಾ ಸಾಮರ್ಥ್ಯಗಳ ಸಾಧನೆಯ ಭಾಗ.

| **ಸಾಮರ್ಥ್ಯ** | **ನಗರ ಗಂಡು ಮತ್ತು ಹೆಣ್ಣು ಮಕ್ಕಳ ಸಾಧನೆಯ ಭಾಗ** | | **ತೃಪ್ತಿಕರ ಸಾಧನೆಯ ಭಾಗ** | |
|---|---|---|---|---|
| | **ಗಂಡು ಮಕ್ಕಳು** (ಸಂಖ್ಯೆ=೮೪೦) | **ಹೆಣ್ಣು ಮಕ್ಕಳು** (ಸಂಖ್ಯೆ=೩೬೦) | **ಗಂಡು ಮಕ್ಕಳು** | **ಹೆಣ್ಣು ಮಕ್ಕಳು** |
| ೧ | ೩೬೧ ೪೩ | ೧೬೨ ೪೫ | ೦.೬೦ | ೦.೫೪ |
| ೨ | ೩೯೫ (೪೭) | ೧೭೬ (೪೯) | ೦.೫೬ | ೦.೫೮ |
| ೩ | ೩೫೩ (೪೨) | ೧೭೩ (೪೮) | ೦.೫೧ | ೦.೫೭ |
| ೪ | ೫೨೧ (೬೨) | ೨೩೪ (೬೫) | ೦.೭೧ | ೦.೫೭ |
| ೫ | ೪೮೭ (೫೮) | ೨೧೨ (೫೯) | ೦.೬೭ | ೦.೭೩ |
| ೬ | ೪೪೫ (೫೩) | ೧೮೭ (೫೨) | ೦.೬೨ | ೦.೬೮ |
| ೭ | ೫೦೪ (೬೦) | ೨೦೨ (೫೬) | ೦.೬೯ | ೦.೬೧ |
| ೮ | ೪೨೦ (೫೦) | ೧೭೩ (೪೮) | ೦.೫೯ | ೦.೬೫ |
| ೯ | ೩೫೨ (೪೨) | ೧೬೨ (೪೫) | ೦.೫೧ | ೦.೫೭ |
| ೧೦ | ೪೨೮ (೫೧) | ೧೮೦ (೫೦) | ೦.೫೦ | ೦.೫೯ |
| ಎಲ್ಲವುಗಳಲ್ಲಿ | ೦(೦೦) | ೦(೦೦) | ೦(೦೦) | ೦(೦೦) |

* ೦.೦೫ ತೃಪ್ತಿಕರ ಸಾಧನೆಯ ಮಟ್ಟ

ಆವರಣದಲ್ಲಿರುವ ಸಂಖ್ಯೆಗಳು ಶೇಕಡವಾರು ಸಾಧನೆಯನ್ನು ತಿಳಿಸುತ್ತದೆ.

ಕೋಷ್ಟಕ ೮ನ್ನು ಗಮನಿಸಿದಾಗ ನಗರ ಪ್ರದೇಶದ ಗಂಡು ಮತ್ತು ಹೆಣ್ಣು ಮಕ್ಕಳು ಶೇಕಡ ೫೦ಕ್ಕಿಂತ ಹೆಚ್ಚು ಸಾಧನೆಯನ್ನು ಕೆಲವು ಸಾಮರ್ಥ್ಯಗಳಲ್ಲಿ ಸಾಧಿಸಿರುವುದು ಕಂಡುಬಂದಿದೆ. ಐದು ಸಾಮರ್ಥ್ಯಗಳನ್ನು ಶೇಕಡ ೫೦ಕ್ಕಿಂತ ಕಡಿಮೆ ಗಂಡು ಮತ್ತು ಹೆಣ್ಣುಮಕ್ಕಳು ಸಾಧಿಸಿದರೆ ಯಾವುದೇ ಮಗುವು ಎಲ್ಲಾ ಸಾಮರ್ಥ್ಯಗಳನ್ನು ಸಾಧಿಸುವಲ್ಲಿ ವಿಫಲವಾಗಿದೆ.

ಕೋಷ್ಟಕ ೮ರ ಪ್ರಕಾರ ೦.೦೫ ತೃಪ್ತಿಕರ ಸಾಧನೆಯ ಮಟ್ಟಕ್ಕೆ ಅನ್ವಹಿಸಿರುವಂತೆ ವೀಕ್ಷಿಸಿದ ಸಾಧನೆಯ ಭಾಗವು ಗಂಡು ಮಕ್ಕಳ ಸಾಧನೆಯು ೦.೮೦ (೮೪೦)ಕ್ಕಿಂತ ಕಡಿಮೆಯಾಗಿದ್ದು, ಹೆಣ್ಣುಮಕ್ಕಳ ಸಾಧನೆಯು ೦.೮೦ (೩೬೦)ಕ್ಕಿಂತ ಕಡಿಮೆಯಾಗಿದೆ. ನಗರ ಪ್ರದೇಶದ ಯಾವುದೇ ಮಗುವು ಪ್ರತಿ ಮತ್ತು ಎಲ್ಲಾ ಸಾಮರ್ಥ್ಯಗಳ ತೃಪ್ತಿಕರ ಸಾಧನೆಯನ್ನು ಸಾಧಿಸುವಲ್ಲಿ ವಿಫಲರಾಗಿದ್ದಾರೆ.

ನಗರ ಪ್ರದೇಶದ ಗಂಡು ಮತ್ತು ಹೆಣ್ಣುಮಕ್ಕಳು ಶೇಕಡವಾರು ಸಾಧನೆಯ ರೇಖಾಚಿತ್ರವನ್ನು ನಕ್ಷೆ ೫ರಲ್ಲಿ ಪ್ರಸ್ತುತ ಪಡಿಸಲಾಗಿದೆ.

ನಕ್ಷೆ ೫. ನಗರ ಪ್ರದೇಶದ ಗಂಡು ಮತ್ತು ಹೆಣ್ಣು ಮಕ್ಕಳ ಶೇಕಡವಾರು ಸಾಮರ್ಥ್ಯಗಳ ಸಾಧನೆಯ ಭಾಗ



**ಕೋಷ್ಟಕ : ೯**

ನಗರ ಮತ್ತು ಗ್ರಾಮೀಣ ಪ್ರದೇಶದ ಶಾಲೆಗಳಲ್ಲಿ ಪಾಠಬೋಧನೆ ಮಾಡುವ ಶಿಕ್ಷಕರು ಪರಿಸರ ಅಧ್ಯಯನ (ವಿಜ್ಞಾನ) ವಿಷಯದಲ್ಲಿ ಅಳವಡಿಸಿದ ಪ್ರತಿಯೊಂದು ಹಾಗೂ ಎಲ್ಲಾ ಸಾಮರ್ಥ್ಯಗಳ ಸಾಧನೆಯ ಭಾಗ.

| ಸಾಮರ್ಥ್ಯ | ಸಾಧನೆಯ ಭಾಗ | | ತೃಪ್ತಿಕರ ಸಾಧನೆಯ ಭಾಗ | |
|---|---|---|---|---|
| | ನಗರ ಶಾಲಾ ಶಿಕ್ಷಕರು (ಸಂಖ್ಯೆ=೪೦) | ಗ್ರಾಮೀಣ ಶಾಲಾ ಶಿಕ್ಷಕರು (ಸಂಖ್ಯೆ=೧೬೦) | ನಗರ ಶಾಲಾ ಶಿಕ್ಷಕರು | ಗ್ರಾಮೀಣ ಶಾಲಾ ಶಿಕ್ಷಕರು |
| ೧ | ೦೯ (೨೩) | ೨೬ (೧೬) | ೦.೨೯ | ೦.೨೧ |
| ೨ | ೧೦ (೨೫) | ೨೯ (೧೮) | ೦.೩೧ | ೦.೨೩ |
| ೩ | ೧೨ (೩೧) | ೩೨ (೨೦) | ೦.೩೩ | ೦.೨೮ |
| ೪ | ೧೪ (೩೫) | ೯೮ (೬೧) | ೦.೭೯ | ೦.೩೬ |
| ೫ | ೧೬ (೪೦) | ೪೮ (೩೦) | ೦.೪೨ | ೦.೩೧ |
| ೬ | ೧೬ (೪೦) | ೪೬ (೨೯) | ೦.೩೨ | ೦.೩೨ |
| ೭ | ೨೦ (೫೦) | ೬೬ (೪೧) | ೦.೫೯ | ೦.೫೧ |
| ೮ | ೧೩ (೩೨) | ೪೮ (೩೦) | ೦.೪೩ | ೦.೩೬ |
| ೯ | ೧೬ (೩೯) | ೫೮ (೩೬) | ೦.೫೦ | ೦.೪೩ |
| ೧೦ | ೨೪ (೫೯) | ೭೮ (೪೯) | ೦.೫೮ | ೦.೪೯ |
| ಎಲ್ಲವುಗಳಲ್ಲಿ | ೦(೦೦) | ೦(೦೦) | ೦(೦೦) | ೦(೦೦) |

* ೦.೦೫ ತೃಪ್ತಿಕರ ಸಾಧನೆಯ ಮಟ್ಟವಾಗಿದೆ.

ಆವರಣದಲ್ಲಿರುವ ಸಂಖ್ಯೆಗಳು ಸಾಧಕರ ಶೇಕಡವನ್ನು ತಿಳಿಸುತ್ತದೆ.

ಕೋಷ್ಟಕ-೯ ಈ ಮೇಲೆ ತಿಳಿಸಿರುವಂತೆ ಗ್ರಾಮೀಣ ಹಾಗೂ ನಗರ ಪ್ರದೇಶಗಳಲ್ಲಿ ಬೋಧಿಸುವ ಶಿಕ್ಷಕರು ಸಾಮರ್ಥ್ಯ ೧, ೨ ಸಸ್ಯಗಳ ಪಾಲನೆ ಮತ್ತು ಉಪಯೋಗ, ನೀರಿನ ವಿವಿಧ ಭೌತಿಕ ಸ್ಥಿತಿಗಳ ಸಾಧನೆಯನ್ನು ಕೇವಲ ಶೇಕಡ ೨೫ರಷ್ಟನ್ನು ಸಾಧಿಸಿದರೆ ಇನ್ನುಳಿದ ೩, ೪, ೫, ೬, ೮, ೯ ಸಾಮರ್ಥ್ಯಗಳಾದ ವಿವಿಧ ವಸ್ತುಗಳ ಸ್ಥಿತಿಗಳು, ವಸ್ತುವಿನ ವಿವಿಧ ರುಚಿಗಳು, ಪ್ರಾಣಿ ಮತ್ತು ಸಸ್ಯಗಳ ಉತ್ಪನ್ನ, ನೀರಿನ ಕಶ್ಮಲಗಳನ್ನು ಬೇರ್ಪಡಿಸುವುದು, ಸಮತೋಲನ ಆಹಾರದ ಪ್ರಾಮುಖ್ಯತೆಗಳನ್ನು ಶೇಕಡ ೫೦ಕ್ಕಿಂತ ಕಡಿಮೆ ಸಾಧನೆಯನ್ನು ಎಲ್ಲಾ ನಗರ ಹಾಗೂ ಗ್ರಾಮೀಣ ಶಿಕ್ಷಕರು ಸಾಧಿಸಿದರೆ, ಸಾಮರ್ಥ್ಯ ೧ನ್ನು ಶೇಕಡ ೫೪ ರಷ್ಟು ನಗರ ಮತ್ತು ೬೯ರಷ್ಟು ಗ್ರಾಮೀಣ ಶಿಕ್ಷಕರು ಸಾಧಿಸಿದ್ದಾರೆ. ಸಾಮರ್ಥ್ಯ ೪ ವಸ್ತುವಿನ ವಿವಿಧ ರುಚಿಗಳು, ಗ್ರಾಮೀಣ ಶಿಕ್ಷಕರು ಶೇಕಡ ೬೧ರಷ್ಟು ಈಡೇರಿಸುವುದು ಗರಿಷ್ಟವಾಗಿದೆ.

ಗ್ರಾಮೀಣ ಹಾಗೂ ನಗರ ಶಿಕ್ಷಕರ ಪ್ರತಿ ಸಾಮರ್ಥ್ಯಗಳ ಶೇಕಡಾವಾರು ರೇಖಾ ಚಿತ್ರವನ್ನು ನಕ್ಷೆ ೬ರಲ್ಲಿ ಸಾದರ ಪಡಿಸಲಾಗಿದೆ.

**ನಕ್ಷೆ ೬. ಗ್ರಾಮೀಣ ಹಾಗೂ ನಗರ ಶಿಕ್ಷಕರ ಶೇಕಡವಾರು ಸಾಮರ್ಥ್ಯಗಳ ಸಾಧನೆಯ ಭಾಗ**



**ಪೂರ್ವಸಿದ್ಧಾಂತ ೫ :** ಜಿಲ್ಲಾ ಪ್ರಾಥಮಿಕ ಯೋಜನೆಯ ಅಡಿಯಲ್ಲಿ ತರಬೇತಿ ಪಡೆದ ಎಲ್ಲಾ ಶಿಕ್ಷಕ, ಶಿಕ್ಷಕಿಯರು ಅನುಮೋದಿಸಿದ ಸಾಮರ್ಥ್ಯಗಳನ್ನು ಮಕ್ಕಳಿಗೆ ತಿಳಿಯಪಡಿಸುವುದರಲ್ಲಿ ಗಣನೀಯ ಸಾಧನೆ ಹೊಂದಿರುತ್ತಾರೆ

**ಕೋಷ್ಟಕ : ೧೦**

ಗ್ರಾಮೀಣ ಪ್ರದೇಶದ ಶಾಲೆಗಳಲ್ಲಿ ಬೋಧಿಸುವ ಶಿಕ್ಷಕ ಹಾಗೂ ಶಿಕ್ಷಕಿಯರು ಪ್ರತಿಯೊಂದು ಹಾಗೂ ಎಲ್ಲಾ ಸಾಮರ್ಥ್ಯಗಳ ತೃಪ್ತಿಕರ ಸಾಧನೆಯ ಭಾಗ.

| **ಸಾಮರ್ಥ್ಯ** | **ಗ್ರಾಮೀಣ ಪ್ರದೇಶದ ಶಿಕ್ಷಕರ ಸಾಧನೆಯ ಭಾಗ** | | **ತೃಪ್ತಿಕರ ಸಾಧನೆಯ ಭಾಗ** | |
|---|---|---|---|---|
| | **ಶಿಕ್ಷಕರು** (ಸಂಖ್ಯೆ=೧೨೮) | **ಶಿಕ್ಷಕಿಯರು** (ಸಂಖ್ಯೆ=೩೨) | **ಶಿಕ್ಷಕರು** | **ಶಿಕ್ಷಕಿಯರು** |
| ೧ | ೧೪ (೧೧) | ೦೩ (೯) | ೦.೧೩ | ೦.೧೮ |
| ೨ | ೧೮ (೧೪) | ೦೪ (೧೦) | ೦.೧೯ | ೦.೨೦ |
| ೩ | ೪೧ (೩೨) | ೧೦ (೩೦) | ೦.೪೬ | ೦.೪೩ |
| ೪ | ೬೯ (೫೪) | ೧೬ (೪೯) | ೦.೬೭ | ೦.೬೦ |
| ೫ | ೬೪ (೫೦) | ೧೩ (೪೦) | ೦.೬೦ | ೦.೫೮ |
| ೬ | ೪೫ (೩೫) | ೧೦ (೩೧) | ೦.೪೦ | ೦.೫೯ |
| ೭ | ೩೩ (೨೬) | ೦೬ (೧೯) | ೦.೪೫ | ೦.೪೪ |
| ೮ | ೩೩ (೨೬) | ೦೪ (೧೧) | ೦.೩೦ | ೦.೨೬ |
| ೯ | ೩೦ (೨೪) | ೦೬ (೨೦) | ೦.೨೯ | ೦.೨೯ |
| ೧೦ | ೪೬ (೩೬) | ೦೯ (೨೯) | ೦.೩೫ | ೦.೩೪ |
| ಎಲ್ಲವುಗಳಲ್ಲಿ | ೦(೦೦) | ೦(೦೦) | ೦(೦೦) | ೦(೦೦) |

*೦.೦೫ ತೃಪ್ತಿಕರ ಸಾಧನೆಯ ಮಟ್ಟ.

ಆವರಣದಲ್ಲಿರುವ ಸಂಖ್ಯೆಗಳು ಶೇಕಡ ಸಾಧನೆಯನ್ನು ತಿಳಿಸುತ್ತದೆ.

ಕೋಷ್ಟಕ ೧೦ರಲ್ಲಿ ಕಂಡು ಬಂದಿರುವಂತೆ ಪ್ರತಿ ಸಾಮರ್ಥ್ಯದ ಸಾಧನೆಯು ಶೇಕಡ ೧೧ ರಿಂದ ೫೪ ರವರೆಗೆ ಗ್ರಾಮೀಣ ಶಿಕ್ಷಕರ ಸಾಧನೆಯಾಗಿದ್ದರೆ, ಶೇಕಡ ೯ರಿಂದ ೪೯ರವರೆಗೆ ಗ್ರಾಮೀಣ ಶಿಕ್ಷಕಿಯರ ಸಾಧನೆಯಾಗಿರುತ್ತದೆ. ಶಿಕ್ಷಕ ಅಥವ ಶಿಕ್ಷಕಿಯರು ಯಾರೊಬ್ಬರು ಪ್ರತಿ ಅಥವಾ ಎಲ್ಲಾ ಸಾಮರ್ಥ್ಯಗಳ ಸಾಧನೆಯನ್ನು ಈಡೇರಿಸಿರುವುದಿಲ್ಲ. ಬೋಧಕ ವರ್ಗದ ಸಂಗತಿಯನ್ನು ಗಮನಿಸಿದಾಗ ಯಾರೊಬ್ಬರೂ ಕಲಿಕಾ ಕನಿಷ್ಠ ಹಂತಗಳ ತೃಪ್ತಿಕರ ಸಾಧನೆಯನ್ನು ಸಾಧಿಸಿರುವುದಿಲ್ಲ.

ಗ್ರಾಮೀಣ ಪ್ರದೇಶದ ಶಾಲೆಗಳಲ್ಲಿ ಬೋಧಿಸುವ ಶಿಕ್ಷಕ ಮತ್ತು ಶಿಕ್ಷಕಿಯರ ಶೇಕಡ ಸಾಮರ್ಥ್ಯಗಳ ಸಾಧನೆಯ ರೇಖಾ ಚಿತ್ರವನ್ನು ನಕ್ಷೆ ೭ ರಲ್ಲಿ ಪ್ರಸ್ತುತ ಪಡಿಸಲಾಗಿದೆ.

ನಕ್ಷೆ ೭. ಗ್ರಾಮೀಣ ಪ್ರದೇಶದ ಶಾಲೆಗಳಲ್ಲಿ ಬೋಧಿಸುವ ಶಿಕ್ಷಕ ಮತ್ತು ಶಿಕ್ಷಕಿಯರ ಶೇಕಡವಾರು ಸಾಮರ್ಥ್ಯಗಳ ಸಾಧನೆಯ ಭಾಗ

ಅಪೇಕ್ಷಿಸಿದ ಸಾಧನೆಯ ಮಟ್ಟ

ಶೇಕಡ

100
80
60
40
20
0

1 2 3 4 5 6 7 8 9 10

ಸಾಮರ್ಥ್ಯಗಳು

 ಶಿಕ್ಷಕ  ಶಿಕ್ಷಕಿ

**ಕೋಷ್ಟಕ : ೧೧**

ನಗರ ಶಾಲೆಗಳಲ್ಲಿ ಬೋಧಿಸುವ ಶಿಕ್ಷಕ ಮತ್ತು ಶಿಕ್ಷಕಿಯರ ಪ್ರತಿಯೊಂದು ಸಾಮರ್ಥ್ಯಗಳ ತೃಪ್ತಿಕರ ಸಾಧನೆಯ ಭಾಗ.

| ಸಾಮರ್ಥ್ಯ | ಗ್ರಾಮೀಣ ಪ್ರದೇಶದ ಶಿಕ್ಷಕರ ಸಾಧನೆಯ ಭಾಗ | | ತೃಪ್ತಿಕರ ಸಾಧನೆಯ ಭಾಗ | |
|---|---|---|---|---|
| | ಶಿಕ್ಷಕರು (ಸಂಖ್ಯೆ=೩೦) | ಶಿಕ್ಷಕಿಯರು (ಸಂಖ್ಯೆ=೧೦) | ಶಿಕ್ಷಕರು | ಶಿಕ್ಷಕಿಯರು |
| ೧ | ೦೫ (೧೫) | ೦೧ (೧೧) | ೦.೩೪ | ೦.೧೨ |
| ೨ | ೦೬ (೨೦) | ೦೨ (೧೬) | ೦.೨೨ | ೦.೨೩ |
| ೩ | ೧೪ (೪೫) | ೦೪ (೪೦) | ೦.೫೬ | ೦.೪೯ |
| ೪ | ೨೦ (೬೬) | ೦೭ (೬೫)* | ೦.೭೭ | ೦.೭೪ |
| ೫ | ೧೯ (೬೨) | ೦೬ (೬೦) | ೦.೭೪ | ೦.೬೮ |
| ೬ | ೧೮ (೬೦) | ೦೫ (೫೪) | ೦.೪೨ | ೦.೪೦ |
| ೭ | ೧೭ (೫೫) | ೦೩ (೩೦) | ೦.೪೮ | ೦.೫೦ |
| ೮ | ೧೫ (೫೦) | ೦೪ (೪೦) | ೦.೩೦ | ೦.೨೬ |
| ೯ | ೧೪ (೪೮) | ೦೬ (೬೦) | ೦.೨೩ | ೦.೨೩ |
| ೧೦ | ೧೬ (೫೩) | ೦೬ (೬೦) | ೦.೩೩ | ೦.೩೩ |
| ಎಲ್ಲವುಗಳಲ್ಲಿ | ೦ (೦೦) | ೦ (೦೦) | ೦ (೦೦) | ೦ (೦೦) |

* ೦.೦೫ ತೃಪ್ತಿಕರ ಸಾಧನೆಯ ಮಟ್ಟ.

ಆವರಣದಲ್ಲಿರುವ ಸಂಖ್ಯೆಗಳು ಶೇಕಡ ಸಾಧನೆಯನ್ನು ತಿಳಿಸುತ್ತದೆ.

ಕೋಷ್ಟಕ ೧೧ರ ಪ್ರಕಾರ ನಗರ ಪ್ರದೇಶದ ಶಿಕ್ಷಕರ ಶೇಕಡ ಸಾಧನೆಯ ಭಾಗವು ೧೫ ರಿಂದ ೬೮ರವರೆಗೆಯಿದ್ದರೆ, ನಗರ ಪ್ರದೇಶದ ಶಿಕ್ಷಕಿಯರ ಶೇಕಡ ಸಾಧನೆಯ ಭಾಗ ೧೧ ರಿಂದ ೬೫ ಆಗಿರುತ್ತದೆ. ಎರಡು ಗುಂಪುಗಳ ಬೋಧಕವರ್ಗ ಕೇವಲ ಸಾಮರ್ಥ್ಯ ನಾಲ್ಕನ್ನು ಮಾತ್ರ ತೃಪ್ತಿಕರವಾಗಿ ಈಡೇರಿಸಿರುತ್ತಾರೆ. ಇನ್ನುಳಿದ ೯ ಸಾಮರ್ಥ್ಯಗಳ ಸಾಧನೆಯಲ್ಲಿ ಈ ಎರಡೂ ಗುಂಪುಗಳು ವಿಫಲವಾಗಿವೆ. ಆದ್ದರಿಂದ ತೃಪ್ತಿಕರ ಸಾಧನೆಯ ಮಟ್ಟ ೦.೦೫ಕ್ಕೆ ನಗರ ಶಿಕ್ಷಕರ ಸಾಧನೆಯು ೦.೭೭ (೩೦)ಕ್ಕಿಂತ ಕಡಿಮೆಯಾಗಿದ್ದರೆ ನಗರ ಶಿಕ್ಷಕಿಯರ ಸಾಧನೆಯು ೦.೭೪(೧೦)ಕ್ಕಿಂತ ಕಡಿಮೆಯಾಗಿರುತ್ತದೆ. ಆದ್ದರಿಂದ ನಗರ ಪ್ರದೇಶದ ಯಾವುದೇ ಬೋಧಕ ವರ್ಗವು ಪರಿಸರ ಅಧ್ಯಯನ (ವಿಜ್ಞಾನ) ವಿಷಯದಲ್ಲಿಯ ಕಲಿಕಾ ಕನಿಷ್ಠ ಹಂತಗಳ ಸಮರ್ಥನೀಯ ಸಾಧನೆಯಲ್ಲಿ ವಿಫಲರಾಗಿದ್ದಾರೆ ಎಂಬುದು ಕಂಡುಬಂದಿದೆ.

ನಗರ ಪ್ರದೇಶದ ಶಾಲೆಗಳಲ್ಲಿ ಬೋಧಿಸುವ ಶಿಕ್ಷಕ ಮತ್ತು ಶಿಕ್ಷಕಿಯರ ಪ್ರತಿ ಸಾಮರ್ಥ್ಯದ ಸಾಧನೆಯ ಶೇಕಡವಾರು ರೇಖಾ ಚಿತ್ರವನ್ನು ನಕ್ಷೆ ೮ ರಲ್ಲಿ ಪ್ರಸ್ತುತ ಪಡಿಸಲಾಗಿದೆ.

ನಕ್ಷೆ ೮. ನಗರ ಪ್ರದೇಶದ ಶಾಲೆಗಳಲ್ಲಿ ಬೋಧಿಸುವ ಶಿಕ್ಷಕ ಮತ್ತು ಶಿಕ್ಷಕಿಯರ ಶೇಕಡವಾರು ಸಾಮರ್ಥ್ಯಗಳ ಸಾಧನೆಯ ಭಾಗ



**ಪೂರ್ವ ಸಿದ್ಧಾಂತ ೬ :** ಸರಕಾರಿ ಮತ್ತು ಖಾಸಗಿ ಶಾಲೆಗಳಲ್ಲಿ ಬೋಧಿಸುವ ಶಿಕ್ಷಕರು ಪರಿಸರ ಅಧ್ಯಯನ (ವಿಜ್ಞಾನ) ವಿಷಯದಲ್ಲಿ ಅಳವಡಿಸಿದ ಪ್ರತಿ ಹಾಗೂ ಎಲ್ಲಾ ಸಾಮರ್ಥ್ಯಗಳನ್ನು ಗಣನೀಯವಾಗಿ ಸಾಧಿಸಬಲ್ಲರು.

**ಕೋಷ್ಟಕ : ೧೨**

ಗ್ರಾಮೀಣ ಪ್ರದೇಶದ ಸರಕಾರಿ ಮತ್ತು ಖಾಸಗಿ ಶಾಲೆಗಳಲ್ಲಿ ಬೋಧಿಸುವ ಶಿಕ್ಷಕರು ಪರಿಸರ ಅಧ್ಯಯನ (ವಿಜ್ಞಾನ) ವಿಷಯದಲ್ಲಿಯ ಪ್ರತಿಯೊಂದು ಸಾಮರ್ಥ್ಯಗಳ ಸಾಧನೆಯ ಭಾಗ.

| **ಸಾಮರ್ಥ್ಯ** | **ಗ್ರಾಮೀಣ ಪ್ರದೇಶದ ಶಿಕ್ಷಕರ ಸಾಧನೆಯ ಭಾಗ** | | **ತೃಪ್ತಿಕರ ಸಾಧನೆಯ ಭಾಗ** | |
|---|---|---|---|---|
| | **ಸರಕಾರಿ** (ಸಂಖ್ಯೆ=೧೨೮) | **ಖಾಸಗಿ** (ಸಂಖ್ಯೆ=೩೨) | **ಸರಕಾರಿ** | **ಖಾಸಗಿ** |
| ೧ | ೧೯ (೧೫) | ೦೫ (೧೬) | ೦.೧೪ | ೦.೧೪ |
| ೨ | ೨೨ (೧೭) | ೦೫ (೧೬) | ೦.೧೯ | ೦.೧೮ |
| ೩ | ೨೩ (೧೮) | ೦೬ (೧೯) | ೦.೨೦ | ೦.೧೯ |
| ೪ | ೭೭ (೬೦) | ೧೯ (೫೮) | ೦.೬೬ | ೦.೬೪ |
| ೫ | ೭೦ (೫೫) | ೧೭ (೫೩) | ೦.೬೪ | ೦.೬೦ |
| ೬ | ೫೧ (೪೦) | ೧೨ (೩೭) | ೦.೪೫ | ೦.೩೭ |
| ೭ | ೫೦ (೩೯) | ೧೩ (೪೦) | ೦.೪೦ | ೦.೪೧ |
| ೮ | ೫೬ (೪೪) | ೧೩ (೪೦) | ೦.೪೨ | ೦.೩೯ |
| ೯ | ೪೦ (೩೧) | ೦೯ (೨೯) | ೦.೩೦ | ೦.೨೯ |
| ೧೦ | ೩೬ (೨೮) | ೦೮ (೨೫) | ೦.೨೭ | ೦.೨೪ |
| ಎಲ್ಲವುಗಳಲ್ಲಿ | ೦(೦೦) | ೦(೦೦) | ೦(೦೦) | ೦(೦೦) |

* ೦.೦೫ ತೃಪ್ತಿಕರ ಸಾಧನೆಯ ಮಟ್ಟ.

ಆವರಣದಲ್ಲಿರುವ ಸಂಖ್ಯೆಗಳು ಸಾಮರ್ಥ್ಯಗಳ ಶೇಕಡ ಸಾಧನೆಯಾಗಿರುತ್ತದೆ.

ಕೋಷ್ಟಕ ೧೨ರಲ್ಲಿರುವಂತೆ ಗ್ರಾಮೀಣ ಪ್ರದೇಶದ ಸರಕಾರಿ ಮತ್ತು ಖಾಸಗಿ ಶಾಲೆಗಳಲ್ಲಿ ಬೋಧಿಸುವ ಶಿಕ್ಷಕರಲ್ಲಿ ಶೇಕಡ ಸಾಮರ್ಥ್ಯಗಳ ಸಾಧನೆಯು ೧೫ ರಿಂದ ೬೦ರಷ್ಟು ಸರಕಾರಿ ಶಾಲೆಗಳದ್ದಾಗಿದ್ದರೆ, ೧೫ ರಿಂದ ೫೮ರಷ್ಟು ಖಾಸಗಿ ಶಾಲೆಗಳದ್ದಾಗಿದೆ. ವಿವಿಧ ತರಬೇತಿಗಳನ್ನು ಪಡೆದ ಸರಕಾರಿ ಶಾಲೆಗಳ ಶಿಕ್ಷಕರ ಗರಿಷ್ಟ ಸಾಧನೆ ೬೦ ಆಗಿದ್ದರೆ ಯಾವುದೇ ತರಬೇತಿ ಪಡೆಯದ ಖಾಸಗಿ ಶಾಲೆಗಳ ಶಿಕ್ಷಕರ ಗರಿಷ್ಟ ಸಾಧನೆ ೫೮ ಆಗಿರುವುದು ಗಮನಿಸುವ ಅಂಶವಾಗಿದೆ. ಇದು ಕೇವಲ ಸಾಮರ್ಥ್ಯ ೪ ರಲ್ಲಿ ಮಾತ್ರ ಕಂಡು ಬಂದಿದ್ದು, ಉಳಿದ ೯ ಸಾಮರ್ಥ್ಯಗಳ ಸಾಧನೆಯಲ್ಲಿ ೮ ಸಮರ್ಥನೀಯವಾಗಿ ಕಂಡುಬಂದಿಲ್ಲ, ಆದ್ದರಿಂದ ಎಲ್ಲಾ ಸಾಮರ್ಥ್ಯಗಳ ಸಾಧನೆಯ ಶೂನ್ಯವಾಗಿದೆ.

ಗ್ರಾಮೀಣ ಪ್ರದೇಶದ ಸರಕಾರಿ ಮತ್ತು ಖಾಸಗಿ ಶಾಲೆಗಳಲ್ಲಿ ಬೋಧಿಸುವ ಶಿಕ್ಷಕರು ಪ್ರತಿಯೊಂದು ಹಾಗೂ ಎಲ್ಲಾ ಸಾಮರ್ಥ್ಯಗಳ ಸಾಧನೆಯು ಅಪೇಕ್ಷಿಸಿದ ೦.೦೫ ಮಟ್ಟಕ್ಕೆ ೦.೬೬ (೧೨೮) ಮತ್ತು ೦.೬೪ (೩೨)ರಷ್ಟು ಕಡಿಮೆಯಾಗಿದೆ.

ಈ ಅಂಶವು ತೃಪ್ತಿಕರ ಸಾಧನೆಯ ಮಟ್ಟ ೦.೦೫ನ್ನು ಯಾವ ಶಿಕ್ಷಕರೂ ಸಾಧಿಸಿಲ್ಲವೆಂಬುದು ಕಂಡುಬಂದಿದೆ. ಈ ಫಲಿತಾಂಶದಿಂದ ಗ್ರಾಮೀಣ ಸರಕಾರಿ ಮತ್ತು ಖಾಸಗಿ ಶಾಲೆಗಳಲ್ಲಿ ಬೋಧಿಸುವ ಶಿಕ್ಷಕರು ಕನಿಷ್ಠ ಕಲಿಕಾ ಹಂತಗಳ ಸಾಧನೆಯನ್ನು ಸಾಧಿಸಿಲ್ಲವೆಂಬುದು ಗೊತ್ತುಪಡಿಸಲಾಗಿದೆ.

ಗ್ರಾಮೀಣ ಸರಕಾರಿ ಮತ್ತು ಖಾಸಗಿ ಶಾಲೆಗಳಲ್ಲಿ ಬೋಧಿಸುವ ಶಿಕ್ಷಕರ ಪ್ರತಿ ಸಾಮರ್ಥ್ಯಗಳ ಸಾಧನೆಯ ಶೇಕಡವಾರು ಭಾಗದ ರೇಖಾ ಚಿತ್ರವನ್ನು ನಕ್ಷೆ ೯ ರಲ್ಲಿ ಪ್ರಸ್ತುತ ಪಡಿಸಲಾಗಿದೆ.

**ನಕ್ಷೆ ೯. ಗ್ರಾಮೀಣ ಸರಕಾರಿ ಮತ್ತು ಖಾಸಗಿ ಶಾಲೆಗಳಲ್ಲಿ ಬೋಧಿಸುವ ಶಿಕ್ಷಕರ ಶೇಕಡವಾರು ಸಾಮರ್ಥ್ಯಗಳ ಸಾಧನೆಯ ಭಾಗ**

100
80
60
40
20
0
ಶೇಕಡ
ಅಪೇಕ್ಷಿಸಿದ ಸಾಧನೆಯ ಮಟ್ಟ
1 2 3 4 5 6 7 8 9 10
ಸಾಮರ್ಥ್ಯಗಳು

 ಸರಕಾರಿ  ಖಾಸಗಿ

**ಕೋಷ್ಟಕ : ೧೩**

ನಗರ ಪ್ರದೇಶದ ಸರಕಾರಿ ಮತ್ತು ಖಾಸಗಿ ಶಾಲೆಗಳಲ್ಲಿ ಬೋಧಿಸುವ ಶಿಕ್ಷಕರು ಪರಿಸರ ಅಧ್ಯಯನ (ವಿಜ್ಞಾನ) ವಿಷಯದ ಪ್ರತಿ ಸಾಮರ್ಥ್ಯಗಳ ತೃಪ್ತಿಕರ ಸಾಧನೆಯ ಭಾಗ.

| ಸಾಮರ್ಥ್ಯ | ನಗರ ಪ್ರದೇಶ ಶಾಲೆಗಳ ಸಾಧನೆಯ ಭಾಗ | | ತೃಪ್ತಿಕರ ಸಾಧನೆಯ ಭಾಗ | |
|---|---|---|---|---|
| | ಸರಕಾರಿ (ಸಂಖ್ಯೆ=೩೨) | ಖಾಸಗಿ (ಸಂಖ್ಯೆ=೦೮) | ಸರಕಾರಿ | ಖಾಸಗಿ |
| ೧ | ೦೩ (೧೦) | ೦೦ (೦೯) | ೦.೩೫ | ೦.೧೨ |
| ೨ | ೦೬ (೧೮) | ೦೧ (೧೩) | ೦.೨೫ | ೦.೨೩ |
| ೩ | ೧೬ (೫೦) | ೦೪ (೪೮) | ೦.೫೬ | ೦.೫೧ |
| ೪ | ೨೨ (೭೦) | ೦೫ (೬೨) | ೦.೮೦ | ೦.೭೪ |
| ೫ | ೨೧ (೬೫) | ೦೫ (೬೦) | ೦.೭೫ | ೦.೬೯ |
| ೬ | ೧೩ (೪೦) | ೦೩ (೩೮) | ೦.೪೨ | ೦.೪೦ |
| ೭ | ೧೧ (೩೫) | ೦೨ (೩೦) | ೦.೪೪ | ೦.೩೯ |
| ೮ | ೦೭ (೨೭) | ೦೧ (೧೩) | ೦.೩೦ | ೦.೨೬ |
| ೯ | ೦೮ (೨೫) | ೦೨ (೨೫) | ೦.೨೭ | ೦.೨೩ |
| ೧೦ | ೦೮(೨೬) | ೦೨(೨೪) | ೦.೨೯ | ೦.೨೪ |
| ಎಲ್ಲವುಗಳಲ್ಲಿ | ೦(೦೦) | ೦(೦೦) | ೦(೦೦) | ೦(೦೦) |

* ೦.೦೫ ತೃಪ್ತಿಕರ ಸಾಧನೆಯ ಮಟ್ಟ.

ಆವರಣದಲ್ಲಿರುವ ಅಂಕಿಗಳು ಶೇಕಡ ಸಾಧನೆಯ ಭಾಗವಾಗಿದೆ.

ಕೋಷ್ಟಕ ೧೩ರಲ್ಲಿರುವಂತೆ ಶೇಕಡವಾರು ಸಾಮರ್ಥ್ಯಗಳ ಸಾಧನೆಯ ಭಾಗವು ೧೦ ರಿಂದ ೭೦ರಷ್ಟು ನಗರ ಸರಕಾರಿ ಶಾಲೆಯದಾಗಿದ್ದರೆ, ೦೯ ರಿಂದ ೬೮ರಷ್ಟಿರುವುದು ನಗರ ಖಾಸಗಿ ಶಾಲೆಗಳಿಂದ ಕಂಡುಬಂದಿದೆ. ಖಾಸಗಿ ಶಾಲೆಗಳ ಒಟ್ಟು ಸಾಮರ್ಥ್ಯಗಳ ಸಾಧನೆಯು ಶೂನ್ಯವಾಗಿದೆ. ಖಾಸಗಿ ಶಾಲೆಗಳ ಗರಿಷ್ಟ ಸಾಧನೆ ೬೮ನ್ನು ಕೇವಲ ಸಾಮರ್ಥ್ಯ ನಾಲ್ಕರಲ್ಲಿ ಕಾಣಬಹುದಾಗಿದ್ದು, ಇದು ಇನ್ನುಳಿದ ಯಾವುದೇ ೯ ಸಾಮರ್ಥ್ಯಗಳ ಗಣನೀಯ ಸಾಧನೆ ಮಾಡಲು ವಿಫಲವಾಗಿದೆ. ಸರಕಾರಿ ಶಾಲೆಗಳ ಸಾಧನೆಯು ಸಾಮರ್ಥ್ಯ ನಾಲ್ಕರಲ್ಲಿ ತೃಪ್ತಿಕರವಾಗಿದ್ದರೆ ಇನ್ನುಳಿದ ನಾಲ್ಕು ಸಾಮರ್ಥ್ಯಗಳಲ್ಲಿ ಗಣನೀಯ ಸಾಧನೆ ಸಾಧಿಸಿದೆಯಾದರೂ ಇನ್ನುಳಿದ ಐದು ಸಾಮರ್ಥ್ಯಗಳನ್ನು ಸಾಧಿಸುವಲ್ಲಿ ವಿಫಲವಾಗಿರುವುದು ಕಂಡುಬಂದಿದೆ. ಇದರಿಂದ ಖಾಸಗಿ ಶಾಲೆಗಳ ಶಿಕ್ಷಕರು ತರಬೇತಿ ಪಡೆಯದಿದ್ದರೂ ಸರಕಾರಿ ಶಾಲೆಗಳ ಶಿಕ್ಷಕರಿಗೆ ಸರಿಸಮಾನವಾಗಿ ಬೋಧನೆಯನ್ನು ನೀಡಬಲ್ಲರು ಎಂಬುದು ತಿಳಿದುಬಂದಿದೆ.

ಕೋಷ್ಟಕ ೧೩ ಈ ಅಂಶವನ್ನು ಗೊತ್ತುಪಡಿಸುತ್ತದೆ. ೦.೦೫ ತೃಪ್ತಿಕರ ಸಾಧನೆಯ ಮಟ್ಟಕ್ಕೆ ಅನ್ವಹಿಸುವಂತೆ ನಗರ ಸರಕಾರಿ ಮತ್ತು ಖಾಸಗಿ ಶಾಲೆಗಳಲ್ಲಿ ಬೋಧಿಸುವ ಶಿಕ್ಷಕರ ಸಾಮರ್ಥ್ಯಗಳ ಸಾಧನ ಮಟ್ಟವು ೦.೮೦ (೩೨) ಮತ್ತು ೦.೭೪ (೦೮) ತೃಪ್ತಿಕರ ಮಟ್ಟಕ್ಕಿಂತ ಕಡಿಮೆಯಾಗಿದ್ದು, ಸಾಮರ್ಥ್ಯ ನಾಲ್ಕನ್ನು ಹೊರತುಪಡಿಸಿ ನಗರ ಸರಕಾರಿ ಮತ್ತು ಖಾಸಗಿ ಶಾಲೆಗಳು ಉಳಿದ ೯ ಸಾಮರ್ಥ್ಯಗಳನ್ನು ತೃಪ್ತಿಕರವಾಗಿ ಈಡೇರಿಸಿಲ್ಲದಿರುವುದು ಕಂಡುಬಂದಿದೆ. ಇದರಿಂದ ನಗರ ಪ್ರದೇಶದ ಸರಕಾರಿ ಮತ್ತು ಖಾಸಗಿ ಶಾಲೆಗಳಲ್ಲಿ ಬೋಧಿಸುವ ಶಿಕ್ಷಕರು ಕಲಿಕಾ ಕನಿಷ್ಠ ಹಂತಗಳ ಸಮರ್ಥನೀಯ ಸಾಧನೆಯಲ್ಲಿ ವಿಫಲರಾಗಿರುತ್ತಾರೆ.

ನಗರ ಸರ್ಕಾರಿ ಮತ್ತು ಖಾಸಗಿ ಶಾಲೆಗಳಲ್ಲಿ ಬೋಧಿಸುವ ಶಿಕ್ಷಕರ ಪ್ರತಿಯೊಂದು ಸಾಮರ್ಥ್ಯಗಳ ಸಾಧನೆಯ ಶೇಕಡವಾರು ರೇಖಾ ಚಿತ್ರವನ್ನು ನಕ್ಷೆ ೧೦ ರಲ್ಲಿ ಪ್ರಸ್ತುತ ಪಡಿಸಲಾಗಿದೆ.

**ನಕ್ಷೆ ೧೦. ನಗರ ಸರಕಾರಿ ಮತ್ತು ಖಾಸಗಿ ಶಾಲೆಗಳಲ್ಲಿ ಬೋಧಿಸುವ ಶಿಕ್ಷಕರ ಶೇಕಡವಾರು ಸಾಮರ್ಥ್ಯಗಳ ಸಾಧನೆಯ ಭಾಗ**



## ೪. ೪. ಸಾಮರ್ಥ್ಯಗಳ ಸಾಧನೆಯ ಭಾಗವನ್ನು ಹೋಲಿಸುವುದು

ವಿವಿಧ ಗುಂಪುಗಳಿಂದ ಸಾಮರ್ಥ್ಯಗಳ ಸಾಧನೆಯ ಭಾಗವನ್ನು ಕಂಡುಹಿಡಿದ ನಂತರ, ಆಯಾ ಗುಂಪುಗಳಲ್ಲಿ ಎಷ್ಟು ಪ್ರಮಾಣದ ವ್ಯತ್ಯಾಸಗಳಿವೆ ಎಂಬುದು ಪ್ರಮುಖವಾದ ಅಂಶವಾಗಿದೆ. ಇದನ್ನು ತಿಳಿದುಕೊಳ್ಳುವುದಕ್ಕಾಗಿ ಪ್ರತಿ ಹಾಗೂ ಎಲ್ಲಾ ಸಾಮರ್ಥ್ಯಗಳ ಸಾಧನೆಯಲ್ಲಿ ಯಾವುದೇ ಎರಡು ಗುಂಪುಗಳಲ್ಲಿ ವ್ಯತ್ಯಾಸವನ್ನು ಗೊತ್ತುಮಾಡಲು ಈ ಕೆಳಗಿನ ಪೂರ್ವಸಿದ್ಧಾಂತಗಳಿಂದ ಸಾದರಪಡಿಸಲಾಗಿದೆ.

**ಪೂರ್ವಸಿದ್ಧಾಂತ ೬ :** ನಗರ ಹಾಗೂ ಗ್ರಾಮೀಣ ಪ್ರದೇಶದ ಶಾಲೆಗಳಲ್ಲಿ ಓದುತ್ತಿರುವ ಬೇಡ ಸಮುದಾಯದ ಮಕ್ಕಳು ಪರಿಸರ ಅಧ್ಯಯನ (ವಿಜ್ಞಾನ) ವಿಷಯದಲ್ಲಿ ಅಳವಡಿಸಿದ ಪ್ರತಿ ಹಾಗೂ ಎಲ್ಲಾ ಸಾಮರ್ಥ್ಯಗಳ ಸಾಧನೆಯಲ್ಲಿ ಯಾವುದೇ ವ್ಯತ್ಯಾಸವಿರುವುದಿಲ್ಲ.

ಎರಡು ಗುಂಪುಗಳ ಸಾಧನೆಯ ವ್ಯತ್ಯಾಸವನ್ನು ತಿಳಿಯಲು ಜಿ-ಪರೀಕ್ಷೆಯನ್ನು ಗಣಿತದಿಂದ ಆದೇಶವಾಗಿ ಬಳಸಲಾಗಿದೆ. ಜಿ-ಪರೀಕ್ಷೆಯು ಯಾವುದೇ ಎರಡು ಗುಂಪುಗಳ ಸಾಮರ್ಥ್ಯಗಳ ಸಾಧನೆಯಲ್ಲಿಯ ವ್ಯತ್ಯಾಸಗಳನ್ನು ನಿಖರವಾಗಿ ತಿಳಿಸಬಲ್ಲದು ಎಲ್ಲಾ ಗುಂಪುಗಳಲ್ಲಿಯ ವ್ಯತ್ಯಾಸಗಳನ್ನು ಕಂಡು ಹಿಡಿಯಲು ೦.೦೫ನ್ನು ಅಪೇಕ್ಷಿಸಿದ ಸಾಧನೆಯ ಮಟ್ಟವಾಗಿ ತೆಗೆದುಕೊಳ್ಳಲಾಗಿದೆ. ಫಲಿತಾಂಶಗಳನ್ನು ನಮೂನೆ-೧೫ರಲ್ಲಿ ಪ್ರಸ್ತುತ ಪಡಿಸಲಾಗಿದೆ.

ಮೇಲಿನ ಅಂಶಕ್ಕೆ ಪೂರಕವಾಗಿ ನಮೂನೆ-೨೦ರಲ್ಲಿ ವಿವಿಧ ಶಾಲೆಗಳು ಸಾಮರ್ಥ್ಯಗಳ ಸಾಧನೆಯ ಶೇಕಡವಾರು ವರ್ಗೀಕರಣವನ್ನು ಈ ಕೆಳಗೆ ಪ್ರಸ್ತುತ ಪಡಿಸಲಾಗಿದೆ.

**ಕೋಷ್ಟಕ : ೧೪**

ವಿವಿಧ ಶಾಲೆಯ ಮಕ್ಕಳ ಶೇಕಡವಾರು ಸಾಮರ್ಥ್ಯಗಳ ಸಾಧನೆ

| ಶೇಕಡ ಸಾಮರ್ಥ್ಯಗಳ ಸಾಧನೆ | ಮಕ್ಕಳ ಶೇಕಡವಾರು ಸಾಧನೆಯ ಭಾಗ | | | | | |
|---|---|---|---|---|---|---|
| | ನಗರ ಶಾಲೆ ಸಂಖ್ಯೆ=೧೨೦೦ | ಗ್ರಾಮೀಣ ಶಾಲೆ ಸಂಖ್ಯೆ=೨೮೦೦ | ಗ್ರಾಮೀಣ ಸರ್ಕಾರಿ ಸಂಖ್ಯೆ=೧೯೬೦ | ಗ್ರಾಮೀಣ ಖಾಸಗಿ ಸಂಖ್ಯೆ=೮೪೦ | ನಗರ ಸರ್ಕಾರಿ ಸಂಖ್ಯೆ=೮೪೦ | ನಗರ ಖಾಸಗಿ ಸಂಖ್ಯೆ=೩೬೦ |
| ೯೦-೧೦೦ | ೦ | ೦ | ೦ | ೦ | ೦ | ೦ |
| ೮೦-೯೦ | ೦ | ೦ | ೦ | ೦ | ೦ | ೦ |
| ೭೦-೮೦ | ೦ | ೦ | ೦ | ೦ | ೦ | ೭ (೨) |
| ೬೦-೭೦ | ೧೫೬ (೧೩) | ೨೮ (೦೧) | ೭೮ (೪) | ೪೨ (೫) | ೭೬ (೯) | ೧೪ (೪) |
| ೫೦-೬೦ | ೧೮೦ (೧೫) | ೩೦೮ (೧೧) | ೯೮ (೫) | ೭೬ (೯) | ೧೫೯ (೧೯) | ೧೪ (೪) |
| ೪೦-೫೦ | ೩೪೮ (೨೯) | ೩೯೨ (೧೪) | ೫೪೯ (೨೮) | ೧೬೮ (೨೦) | ೨೬೯ (೩೨) | ೧೦೮ (೩೦) |
| ೩೦-೪೦ | ೧೯೨ (೧೬) | ೭೮೪ (೨೮) | ೪೭೦ (೨೪) | ೨೭೭ (೩೩) | ೧೩೪ (೧೬) | ೮೩ (೨೩) |
| ೨೦-೩೦ | ೯೬ (೮) | ೫೦೪ (೧೮) | ೪೧೨ (೨೧) | ೧೩೫ (೧೬) | ೧೦೧ (೧೨) | ೬೫ (೧೮) |
| ೧೦-೨೦ | ೨೨೮ (೧೯) | ೪೭೬ (೧೭) | ೨೩೫ (೧೨) | ೯೨ (೧೧) | ೫೯ (೦೭) | ೪೦ (೧೧) |
| ೦-೧೦ | ೦ (೦) | ೩೦೮ (೧೧) | ೧೧೮ (೬) | ೫೦ (೬) | ೪೨ (೫) | ೨೯ (೮) |
| ಒಟ್ಟು | ೧೨೦೦ (೧೦೦) | ೨೮೦೦ (೧೦೦) | ೧೯೬೦ (೧೦೦) | ೮೪೦ (೧೦೦) | ೮೪೦ (೧೦೦) | ೩೬೦ (೧೦೦) |

ಕೋಷ್ಟಕ ೧೪ರಲ್ಲಿ ಪ್ರಸ್ತುತ ಪಡಿಸಿರುವ ಪ್ರಕಾರ ಕೊನೆಯ ಪಕ್ಷ ಶೇಕಡ ೧೧ರಷ್ಟು ಸಾಮರ್ಥ್ಯಗಳನ್ನು ಯಾವ ಬಗೆಯ ಶಾಲೆಯ ಮಗು ಗಣನೀಯವಾಗಿ ಈಡೇರಿಸಿಲ್ಲ. ಕೆಲವು ನಗರ ಪ್ರದೇಶದ ಶಾಲೆಗಳ ಮಕ್ಕಳ ಶೇಕಡ ೭೦ರಷ್ಟು ಸಾಮರ್ಥ್ಯಗಳನ್ನು ಈಡೇರಿಸುವಲ್ಲಿ ಸಫಲರಾಗಿದ್ದಾರೆ. ಗ್ರಾಮೀಣ ಪ್ರದೇಶ ಯಾವ ಶಾಲೆಯ ಮಗುವೂ ಶೇಕಡ ೮೦ರಷ್ಟು ಸಾಮರ್ಥ್ಯಗಳನ್ನು ಈಡೇರಿಸಿಲ್ಲ. ನಗರ ಪ್ರದೇಶದ ಶಾಲೆಗಳಲ್ಲಿಯ ಮಕ್ಕಳ ಶೇಕಡ ಸಾಧನೆಯು ೩೦ಕ್ಕಿಂತ ಹೆಚ್ಚು ಆಗಿರುತ್ತದೆ. ಆದರೆ ಗ್ರಾಮೀಣ ಪ್ರದೇಶದ ಶಾಲೆಗಳಲ್ಲಿಯ ಮಕ್ಕಳ ಸಾಧನೆಯು ಶೇಕಡ ೩೦ಕ್ಕಿಂತ ಕಡಿಮೆ ಪ್ರಮಾಣದ್ದಾಗಿದೆ.

ಗ್ರಾಮೀಣ ಪ್ರದೇಶದ ಸರಕಾರಿ ಶಾಲೆಯ ೪ ನೇಯ ತರಗತಿಯಲ್ಲಿ ಓದುವ ಮಗುವಿನ ಕಲಿಕೆಯು ಶೇಕಡ ೯೦ರಷ್ಟು ಸಾಮರ್ಥ್ಯಗಳನ್ನು ಈಡೇರಿಸುವ ಮಟ್ಟ ತಲುಪಿಲ್ಲ. ಆದರೆ ನಗರ ಪ್ರದೇಶದ ಶಾಲೆಗಳಲ್ಲಿ ಓದುವ ಮಕ್ಕಳ ಈ ಸಾಧನೆಯು ೫೦ರಷ್ಟು ಮಕ್ಕಳು ಶೇಕಡ ೮೦ರಷ್ಟು ಸಾಮರ್ಥ್ಯಗಳನ್ನು ಸಾಧಿಸಿರುತ್ತಾರೆ.

ಗಮನಿಸುವ ಅಂಶವೆಂದರೆ ಶೇಕಡ ೨ರಷ್ಟು ನಗರ ಪ್ರದೇಶದ ಸರ್ಕಾರಿ ಮತ್ತು ಖಾಸಗಿ ಶಾಲೆಗಳಲ್ಲಿ ಓದುವ ಮಕ್ಕಳು ಸಾಮರ್ಥ್ಯ ಒಂಬತ್ತನ್ನು ತೃಪ್ತಿಕರವಾಗಿ ಈಡೇರಿಸಿರುತ್ತಾರೆ. ಗ್ರಾಮೀಣ ಸರ್ಕಾರಿ ಶಾಲೆಯಲ್ಲಿ ಓದುವ ಯಾವ ಮಗುವು ಸಾಮರ್ಥ್ಯ ಒಂಬತ್ತನ್ನು ತೃಪ್ತಿಕರವಾಗಿ ಈಡೇರಿಸಿಲ್ಲದಿರುವುದು ಕಂಡುಬಂದಿದೆ. ಶೇಕಡ ೧೭ರಷ್ಟು ಖಾಸಗಿ ಶಾಲೆಗಳು, ಶೇಕಡ ೧೪ರಷ್ಟು ಸರ್ಕಾರಿ ಶಾಲೆಗಳು ಹಾಗೂ ಶೇಕಡ ೨ ರಷ್ಟು ಕನ್ನಡ ಮಾಧ್ಯಮ ಸರ್ಕಾರಿ ಮತ್ತು ಖಾಸಗಿ ಶಾಲೆಗಳು ಸಾಮರ್ಥ್ಯ ೧೦ ಅಂದರೆ 'ಮಾನವನ ದೇಹದಲ್ಲಿರುವ ವಿವಿಧ ಅಂಗಗಳು ಮತ್ತು ಅವುಗಳ ಕಾರ್ಯ'ವನ್ನು ಈಡೇರಿಸಿರುತ್ತಾರೆ. ಶೇಕಡ ೧೭ರಷ್ಟು ಸರ್ಕಾರಿ ಶಾಲೆಗಳು, ಶೇಕಡ ೩ರಷ್ಟು ನಗರ ಪ್ರದೇಶದ ಸರ್ಕಾರಿ ಹಾಗೂ ಖಾಸಗಿ ಶಾಲೆಗಳು ಮತ್ತು ಗ್ರಾಮೀಣ ಸರ್ಕಾರಿ ಶಾಲೆಯಲ್ಲಿ ಓದುತ್ತಿರುವ ಎಲ್ಲಾ ಮಕ್ಕಳು ಸಾಮರ್ಥ್ಯವಾದ ೮-ಸಮತೋಲಿತ ಆಹಾರದ ಅವಶ್ಯಕತೆ ಮತ್ತು ಆರೋಗ್ಯವನ್ನು ಈಡೇರಿಸಿರುತ್ತಾರೆ.

ಇನ್ನುಳಿದ ಸಾಮರ್ಥ್ಯಗಳಾದ

೪ ವಿವಿಧ ವಸ್ತುಗಳ ರುಚಿಗಳನ್ನು ಗೊತ್ತುಪಡಿಸುವುದು

೧ ಸಸ್ಯಗಳ ವಿವಿಧ ಕಾರ್ಯಗಳು ಮತ್ತು ಉಪಯೋಗಗಳು

೩ ವಸ್ತುವಿನ ವಿವಿಧ ಬಗೆಯ ಸ್ಥಿತಿಗಳು

೫ ಪ್ರಾಣಿ ಮತ್ತು ಸಸ್ಯ ಉತ್ಪನ್ನಗಳಾಗಿ ವಿಂಗಡಿಸುವುದು

೬ ಕುಡಿಯುವ ನೀರಿನ ಶುದ್ಧೀಕರಣ ಗಳನ್ನು ಎಲ್ಲಾ ಬಗೆಯ ಶಾಲೆಗಳ ಮಕ್ಕಳು ಹೆಚ್ಚಿನ ಪ್ರಮಾಣದಲ್ಲಿ ಈಡೇರಿಸಿರುತ್ತಾರೆ

ನಕ್ಷೆ ೧೧. ನಗರ ಮತ್ತು ಗ್ರಾಮೀಣ ಪ್ರದೇಶದ ಎಲ್ಲಾ ಶಾಲೆಗಳ ಮಕ್ಕಳ ಸಾಮರ್ಥ್ಯಗಳ ಒಟ್ಟು ಸಾಧನೆಯ ಭಾಗ




 ನಗರ ಸರ್ಕಾರಿ  ನಗರ ಖಾಸಗಿ

 ಗ್ರಾಮೀಣ ಸರ್ಕಾರಿ  ಗ್ರಾಮೀಣ ಖಾಸಗಿ

**ಪೂರ್ವಸಿದ್ಧಾಂತ ೭ :** ನಗರ ಮತ್ತು ಗ್ರಾಮೀಣ ಶಾಲೆಗಳಲ್ಲಿ ಓದುತ್ತಿರುವ ಬೇಡ ಸಮುದಾಯದ ಮಕ್ಕಳು ಪರಿಸರ ಅಧ್ಯಯನ (ವಿಜ್ಞಾನ) ವಿಷಯದಲ್ಲಿ ಅಳವಡಿಸಿದ ಪ್ರತಿ ಹಾಗೂ ಎಲ್ಲಾ ಸಾಮರ್ಥ್ಯಗಳ ಸಾಧನೆಯಲ್ಲಿ ಗಣನೀಯ ವ್ಯತ್ಯಾಸವಿರುವುದಿಲ್ಲ.

**ಕೋಷ್ಟಕ : ೧೫**

ನಗರ ಮತ್ತು ಗ್ರಾಮೀಣ ಪ್ರದೇಶದ ಶಾಲೆಗಳಲ್ಲಿ ಓದುತ್ತಿರುವ ಬೇಡ ಸಮುದಾಯದ ಮಕ್ಕಳ ಪ್ರತಿ ಹಾಗೂ ಎಲ್ಲಾ ಸಾಮರ್ಥ್ಯಗಳ ಸಾಧನೆಯಲ್ಲಿ ಗಣನೀಯ ವ್ಯತ್ಯಾಸವಿದೆ.

| ಸಾಮರ್ಥ್ಯ | ಮಕ್ಕಳ ಸಾಧನೆಯ ಭಾಗ | | | | |
|---|---|---|---|---|---|
| | ಗ್ರಾಮೀಣ (ಸಂಖ್ಯೆ=೨೮೦೦) | ನಗರ (ಸಂಖ್ಯೆ=೧೨೦೦) | $P_1$-$P_2$ | $S_{P1-P2}$ | Z-ಬೆಲೆ |
| ೧ | ೦.೧೮ | ೦.೨೬ | ೦.೦೮ | ೦.೦೩೭೧ | ೧.೧೦ |
| ೨ | ೦.೨೦ | ೦.೨೯ | ೦.೦೯ | ೦.೦೩೮೩ | ೨.೨೯* |
| ೩ | ೦.೨೫ | ೦.೩೩ | ೦.೦೮ | ೦.೦೪೦ | ೧.೮೬ |
| ೪ | ೦.೬೧ | ೦.೭೩ | ೦.೧೨ | ೦.೦೪೧೫ | ೧.೯೯* |
| ೫ | ೦.೩೪ | ೦.೪೨ | ೦.೦೮ | ೦.೦೪೩೪ | ೦.೫೧ |
| ೬ | ೦.೩೧ | ೦.೪೦ | ೦.೦೯ | ೦.೦೪೨೭ | ೨.೦೬* |
| ೭ | ೦.೪೫ | ೦.೫೩ | ೦.೦೮ | ೦.೦೪೪೭ | ೧.೭೭ |
| ೮ | ೦.೩೦ | ೦.೩೭ | ೦.೦೭ | ೦.೦೪೨೧ | ೧.೫೯ |
| ೯ | ೦.೩೭ | ೦.೪೪ | ೦.೦೫ | ೦.೦೪೩೯ | ೧.೪೮ |
| ೧೦ | ೦.೪೯ | ೦.೫೮ | ೦.೦೯ | ೦.೦೪೪೬ | ೨.೦೩* |
| ಎಲ್ಲವುಗಳಲ್ಲಿ | ೦ (೦೦) | ೦ (೦೦) | ೦ (೦೦) | ೦ (೦೦) | ೦ (೦೦) |

* ೦.೦೫ ತೃಪ್ತಿಕರ ಸಾಧನೆಯ ಮಟ್ಟ.

ಕೋಷ್ಟಕ ೧೫ರ ಪ್ರಕಾರ ೨, ೪, ೬ ಮತ್ತು ೧೦ನೇ ಸಾಮರ್ಥ್ಯಗಳಿಗೆ ಬಂದಿರುವ ಜಿ-ಬೆಲೆಯು ೦.೦೫ ತೃಪ್ತಿಕರ ಸಾಧನೆಯ ಮಟ್ಟಕ್ಕೆ ಗಣನೀಯ ವ್ಯತ್ಯಾಸವಿದೆ ಎಂದು ತಿಳಿಸುತ್ತದೆ. ಆದ್ದರಿಂದ ಈ ಮೇಲಿನ ಸಂಶೋಧನಾ ಸಿದ್ಧಾಂತ ವನ್ನು ತಿರಸ್ಕರಿಸಲಾಗುವುದು. ಆದರೆ ಈ ಸಂಶೋಧನಾ ಪೂರ್ವಸಿದ್ಧಾಂತವನ್ನು ಇನ್ನುಳಿದ ಪ್ರತಿ ಹಾಗೂ ಎಲ್ಲಾ ಸಾಮರ್ಥ್ಯಗಳಿಗೆ ಸ್ವೀಕೃತವಾಗಿದೆ. ಆದ್ದರಿಂದ ನಗರ ಪ್ರದೇಶದ ಶಾಲೆಗಳ ಮಕ್ಕಳ ಸಾಮರ್ಥ್ಯ ೨, ೪, ೬ ಮತ್ತು ೧೦ ಗಳ ಸಾಧನೆಯ ಗ್ರಾಮೀಣ ಶಾಲೆಗಳ ಮಕ್ಕಳಿಗಿಂತ ಗಣನೀಯ ಸಾಧನೆಯಾಗಿದೆ ಎಂದು ಪುಷ್ಟೀಕರಿಸಬಹುದು. ಸಾಮರ್ಥ್ಯ ೬ಕ್ಕೆ ಅನ್ವಹಿಸಿದಂತೆ ಗ್ರಾಮೀಣ ಶಾಲಾ ಮಕ್ಕಳ ಸಾಧನೆಯು ನಗರ ಶಾಲಾಮಕ್ಕಳ ಸಾಧನೆಗಿಂತ ಹೆಚ್ಚಾಗಿರುತ್ತದೆ. ೨, ೪, ೬ ಮತ್ತು ೧೦ ಸಾಮರ್ಥ್ಯಗಳು ಈ ಕೆಳಗಿನಂತಿವೆ.

* ನೀರಿನ ವಿವಿಧ ಬಗೆಗಳು ಹಾಗೂ ಇದರ ಮಲೀನತೆ
* ವಿವಿಧ ವಸ್ತುಗಳ ರುಚಿ ಗೊತ್ತುಮಾಡುವುದು
* ಕುಡಿಯುವ ನೀರಿನ ಕಶ್ಮಲಗಳಿಂದ ಶುದ್ಧೀಕರಿಸುವುದು
* ಮಾನವನ ದೇಹದ ವಿವಿಧ ಅಂಗಗಳು ಮತ್ತು ಅವುಗಳ ಕಾರ್ಯಗಳ ಬಗ್ಗೆ ಜ್ಞಾನ ಮೂಡಿಸುವುದು.

**ಪೂರ್ವಸಿದ್ಧಾಂತ ೮ :** ಸರ್ಕಾರಿ ಮತ್ತು ಖಾಸಗಿ ಶಾಲೆಗಳಲ್ಲಿ ಓದುತ್ತಿರುವ ಬೇಡ ಸಮುದಾಯದ ಮಕ್ಕಳು ಪರಿಸರ ಅಧ್ಯಯನ (ವಿಜ್ಞಾನ) ವಿಷಯದಲ್ಲಿ ಅಳವಡಿಸಿದ ಪ್ರತಿ ಹಾಗೂ ಎಲ್ಲಾ ಸಾಮರ್ಥ್ಯಗಳ ಸಾಧನೆಯಲ್ಲಿ ಗಣನೀಯ ವ್ಯತ್ಯಾಸವಿರುವುದಿಲ್ಲ.

**ಕೋಷ್ಟಕ : ೧೬**

ಗ್ರಾಮೀಣ ಪ್ರದೇಶದ ಸರ್ಕಾರಿ ಮತ್ತು ಖಾಸಗಿ ಶಾಲೆಗಳಲ್ಲಿ ಓದುತ್ತಿರುವ ಮಕ್ಕಳು ಪ್ರತಿ ಹಾಗೂ ಎಲ್ಲಾ ಸಾಮರ್ಥ್ಯಗಳ ಸಾಧನೆಯಲ್ಲಿ ಗಣನೀಯ ವ್ಯತ್ಯಾಸವಿದೆ.

| ಸಾಮರ್ಥ್ಯ | ಗ್ರಾಮೀಣ ಪ್ರದೇಶದ ಮಕ್ಕಳ ಸಾಧನೆಯ ಭಾಗ | | | | |
|---|---|---|---|---|---|
| | ಸರ್ಕಾರಿ (ಸಂಖ್ಯೆ=೧೯೬೦) | ಖಾಸಗಿ (ಸಂಖ್ಯೆ=೮೪೦) | $P_1-P_2$ | $S_{P1-P2}$ | Z-ಬೆಲೆ |
| ೧ | ೦.೦೯ | ೦.೧೧ | ೦.೦೩ | ೦.೦೧೭ | ೦.೮೮ |
| ೨ | ೦.೧೪ | ೦.೧೩ | ೦.೦೧ | ೦.೦೪೭ | ೧.೯೭* |
| ೩ | ೦.೩೯ | ೦.೩೩ | ೦.೦೬ | ೦.೦೬೫ | ೦.೯೪ |
| ೪ | ೦.೫೯ | ೦.೪೯ | ೦.೧೦ | ೦.೦೬೭ | ೧.೪೩ |
| ೫ | ೦.೫೬ | ೦.೪೮ | ೦.೦೮ | ೦.೦೯೧ | ೦.೮೬ |
| ೬ | ೦.೩೭ | ೦.೨೯ | ೦.೦೮ | ೦.೦೬೪ | ೧.೨೭ |
| ೭ | ೦.೩೯ | ೦.೩೪ | ೦.೦೫ | ೦.೦೬೫ | ೦.೭೭ |
| ೮ | ೦.೨೫ | ೦.೧೮ | ೦.೦೭ | ೦.೦೫೬ | ೨.೨೫ |
| ೯ | ೦.೨೨ | ೦.೨೦ | ೦.೦೨ | ೦.೫೫ | ೦.೩೬ |
| ೧೦ | ೦.೩೦ | ೦.೨೪ | ೦.೦೬ | ೦.೦೦೬ | ೧.೦೦* |
| ಎಲ್ಲವುಗಳಲ್ಲಿ | ೦ (೦೦) | ೦ (೦೦) | ೦ (೦೦) | ೦ (೦೦) | ೦ (೦೦) |

* ೦.೦೫ ತೃಪ್ತಿಕರ ಸಾಧನೆಯ ಮಟ್ಟ

ಕೋಷ್ಟಕ ೧೬ರಲ್ಲಿರುವಂತೆ ಜಿ-ಬೆಲೆಯು ಗ್ರಾಮೀಣ ಸರ್ಕಾರಿ ಹಾಗೂ ಖಾಸಗಿ ಶಾಲೆಗಳಲ್ಲಿ ಓದುತ್ತಿರುವ ಮಕ್ಕಳು ಕೆಲವು ಸಾಮರ್ಥ್ಯಗಳ ಸಾಧನೆಯಲ್ಲಿ ಗಣನೀಯ ವ್ಯತ್ಯಾಸವಿದೆ.

**ಸಾಮರ್ಥ್ಯ**

- * ಪ್ರಕೃತಿಯ ವಾತಾವರಣಕ್ಕೆ ತಕ್ಕಂತೆ ನೀರಿನ ವಿವಿಧ ಭೌತಿಕ ಸ್ಥಿತಿಗಳನ್ನು ತಿಳಿಸುವುದು (೨)
- * ಸಮತೋಲನ ಆಹಾರ ಹಾಗೂ ಆರೋಗ್ಯದ ಬಗ್ಗೆ ಅರ್ಥೈಸುವುದು (೮)

ಗ್ರಾಮೀಣ ಸರ್ಕಾರಿ ಶಾಲೆಯ ಮಕ್ಕಳು ಖಾಸಗಿ ಶಾಲೆಯ ಮಕ್ಕಳಿಗಿಂತ ಉತ್ತಮ ಸಾಧನೆಯನ್ನು ಸಾಮರ್ಥ್ಯ ೮ ರಿಂದ ೦.೦೫ ತೃಪ್ತಿಕರ ಸಾಧನೆಯ ಮಟ್ಟಕ್ಕೆ ಈಡೇರಿಸಿದರೆ, ಸಾಮರ್ಥ್ಯ ಎರಡನ್ನು ಗ್ರಾಮೀಣ ಖಾಸಗಿ ಶಾಲಾ ಮಕ್ಕಳು, ಸರಕಾರಿ ಶಾಲಾ ಮಕ್ಕಳಿಗಿಂತ ಉತ್ತಮ ಸಾಧನೆ ಮಾಡಿದ್ದಾರೆ.

**ಕೋಷ್ಟಕ : ೧೭**

ನಗರ ಪ್ರದೇಶದ ಸರ್ಕಾರಿ ಮತ್ತು ಖಾಸಗಿ ಶಾಲೆಗಳಲ್ಲಿ ಓದುತ್ತಿರುವ ಮಕ್ಕಳ ಪ್ರತಿ ಹಾಗೂ ಎಲ್ಲಾ ಸಾಮರ್ಥ್ಯಗಳ ಸಾಧನೆಯಲ್ಲಿ ಗಣನೀಯ ವ್ಯತ್ಯಾಸವಿದೆ.

| ಸಾಮರ್ಥ್ಯ | ನಗರ ಪ್ರದೇಶದ ಮಕ್ಕಳ ಸಾಧನೆಯ ಭಾಗ | | | | |
|---|---|---|---|---|---|
| | ಸರ್ಕಾರಿ (ಸಂಖ್ಯೆ=೮೪೦) | ಖಾಸಗಿ (ಸಂಖ್ಯೆ=೩೬೦) | $P_1$-$P_2$ | $Sp_1$-$p_2$ | Z-ಬೆಲೆ |
| ೧ | ೦.೦೯ | ೦.೦೮ | ೦.೦೧ | ೦.೦೩೮ | ೦.೨೬ |
| ೨ | ೦.೧೬ | ೦.೧೬ | ೦.೦೦ | ೦.೦೪೯ | ೦.೦೦ |
| ೩ | ೦.೪೮ | ೦.೪೧ | ೦.೦೭ | ೦.೦೬೭ | ೨.೦೪* |
| ೪ | ೦.೭೦ | ೦.೬೭ | ೦.೦೩ | ೦.೦೬೪ | ೦.೪೭ |
| ೫ | ೦.೬೭ | ೦.೫೭ | ೦.೧೦ | ೦.೦೬೩ | ೧.೫೬ |
| ೬ | ೦.೩೫ | ೦.೩೦ | ೦.೦೫ | ೦.೦೬೫ | ೦.೭೭ |
| ೭ | ೦.೪೦ | ೦.೩೯ | ೦.೦೧ | ೦.೦೫೫ | ೨.೧೮* |
| ೮ | ೦.೨೭ | ೦.೧೮ | ೦.೦೩ | ೦.೦೫೬ | ೦.೮೯ |
| ೯ | ೦.೧೭ | ೦.೧೫ | ೦.೦೨ | ೦.೫೦ | ೦.೪೦ |
| ೧೦ | ೦.೨೬ | ೦.೨೪ | ೦.೦೨ | ೦.೫೮ | ೦.೩೦ |
| ಎಲ್ಲವುಗಳಲ್ಲಿ | ೦ (೦೦) | ೦ (೦೦) | ೦ (೦೦) | ೦ (೦೦) | ೦ (೦೦) |

* ೦.೦೫ ತೃಪ್ತಿಕರ ಸಾಧನೆಯ ಮಟ್ಟ.

ಕೋಷ್ಟಕ ೧೭ರಲ್ಲಿ ಪ್ರಸ್ತುತವಿರುವಂತೆ ಜಿ-ಬೆಲೆಯು ನಗರ ಪ್ರದೇಶದ ಸರ್ಕಾರಿ ಹಾಗೂ ಖಾಸಗಿ ಶಾಲೆಗಳಲ್ಲಿಯ ಮಕ್ಕಳು ಕೆಲವು ಸಾಮರ್ಥ್ಯಗಳ ಸಾಧನೆಯಲ್ಲಿ ವ್ಯತ್ಯಾಸಗಳಿವೆ. ಅವುಗಳು ಇಂತಿವೆ,

**ಸಾಮರ್ಥ್ಯಗಳು**

* ಪ್ರಕೃತಿಯ ವಾತಾವರಣಕ್ಕೆ ತಕ್ಕಂತೆ ನೀರಿನ ವಿವಿಧ ಭೌತಿಕ ಸ್ಥಿತಿಗಳನ್ನು ತಿಳಿಸುವುದು.(೨)

* ತಾಪಮಾನಕ್ಕೆ ತಕ್ಕಂತೆ ವಸ್ತುವಿನ ಸ್ಥಿತಿಗಳಲ್ಲಾಗುವ ಬದಲಾವಣೆಗಳನ್ನು ಗೊತ್ತುಪಡಿಸುವುದು.(೭)

೦.೦೫ ತೃಪ್ತಿಕರ ಸಾಧನೆಯ ಮಟ್ಟಕ್ಕೆ ಅನ್ವಹಿಸುವಂತೆ ನಗರ ಪ್ರದೇಶದ ಸರಕಾರಿ ಶಾಲಾಮಕ್ಕಳು ಸಾಮರ್ಥ್ಯ ೨ರ ಸಾಧನೆಯಲ್ಲಿ ನಗರದ ಖಾಸಗಿ ಶಾಲಾ ಮಕ್ಕಳಿಗಿಂತ ಹೆಚ್ಚು ಸಮರ್ಥನೀಯ ಸಾಧನೆ ಮಾಡಿರುತ್ತಾರೆ. ಆದರೆ ನಗರ ಖಾಸಗಿ ಶಾಲಾ ಮಕ್ಕಳು ಸಾಮರ್ಥ್ಯ ೭ರ ಸಾಧನೆಯು ನಗರ ಸರ್ಕಾರಿ ಶಾಲಾ ಮಕ್ಕಳಿಗಿಂತ ಹೆಚ್ಚು ಸಮರ್ಥನೀಯ ಸಾಧನೆ ಮಾಡಿರುತ್ತಾರೆ.

**ಪೂರ್ವಸಿದ್ಧಾಂತ ೯ :** ನಾಲ್ಕನೇ ತರಗತಿಯಲ್ಲಿ ಓದುತ್ತಿರುವ ಬೇಡ ಸಮುದಾಯದ ಬಾಲಕ-ಬಾಲಕಿಯರು ಪರಿಸರ ಅಧ್ಯಯನ (ವಿಜ್ಞಾನ) ವಿಷಯದಲ್ಲಿ ಅಳವಡಿಸಿದ ಪ್ರತಿ ಹಾಗೂ ಎಲ್ಲಾ ಸಾಮರ್ಥ್ಯಗಳ ಸಾಧನೆಯಲ್ಲಿ ವ್ಯತ್ಯಾಸವಿರುವುದಿಲ್ಲ.

**ಕೋಷ್ಟಕ : ೧೮**

ನಗರ ಪ್ರದೇಶದ ಶಾಲೆಗಳಲ್ಲಿ ಓದುತ್ತಿರುವ ಮಕ್ಕಳು ಪರಿಸರ ಅಧ್ಯಯನ (ವಿಜ್ಞಾನ) ವಿಷಯದಲ್ಲಿ ಅಳವಡಿಸಿದ ಪ್ರತಿ ಹಾಗೂ ಎಲ್ಲಾ ಸಾಮರ್ಥ್ಯಗಳ ಸಾಧನೆಯು ಬಾಲಕ-ಬಾಲಕಿಯರ ನಡುವೆ ಗಣನೀಯ ವ್ಯತ್ಯಾಸವಿದೆ.

| ಸಾಮರ್ಥ್ಯ | ನಗರ ಪ್ರದೇಶದ ಸಾಧನೆಯ ಭಾಗ | | | | |
|---|---|---|---|---|---|
| | ನಗರ ಗಂಡು (ಸಂಖ್ಯೆ=೮೪೦) | ನಗರ ಹೆಣ್ಣು (ಸಂಖ್ಯೆ=೩೬೦) | $P_1$-$P_2$ | $S_{P1-P2}$ | Z-ಬೆಲೆ |
| ೧ | ೦.೪೩ | ೦.೪೫ | ೦.೦೨ | ೦.೦೬೪ | ೦.೨೯ |
| ೨ | ೦.೪೭ | ೦.೪೯ | ೦.೦೨ | ೦.೦೬೫ | ೧.೯೮ |
| ೩ | ೦.೪೨ | ೦.೪೮ | ೦.೦೬ | ೦.೦೬೪೪ | ೦.೯೩ |
| ೪ | ೦.೬೨ | ೦.೬೫ | ೦.೦೩ | ೦.೦೬೩ | ೦.೪೫ |
| ೫ | ೦.೫೮ | ೦.೫೭ | ೦.೦೨ | ೦.೦೬೪ | ೦.೨೩ |
| ೬ | ೦.೫೩ | ೦.೫೨ | ೦.೦೧ | ೦.೦೬೫ | ೦.೧೨ |
| ೭ | ೦.೬೦ | ೦.೫೬ | ೦.೦೪ | ೦.೦೬೪ | ೦.೬೭ |
| ೮ | ೦.೫೦ | ೦.೪೮ | ೦.೦೨ | ೦.೦೬೫ | ೦.೨೫ |
| ೯ | ೦.೪೨ | ೦.೪೫ | ೦.೦೩ | ೦.೦೬೪ | ೦.೪೮ |
| ೧೦ | ೦.೫೧ | ೦.೫೦ | ೦.೦೧ | ೦.೦೬೪ | ೧.೨೫ |
| ಎಲ್ಲವುಗಳಲ್ಲಿ | ೦ (೦೦) | ೦ (೦೦) | ೦ (೦೦) | ೦ (೦೦) | ೦ (೦೦) |

* ೦.೦೫ ತೃಪ್ತಿಕರ ಸಾಧನೆಯ ಮಟ್ಟ.

ಈ ಕೋಷ್ಟಕವನ್ನು ಗಮನಿಸಿದಾಗ ೦.೦೫ ತೃಪ್ತಿಕರ ಸಾಧನೆಯ ಮಟ್ಟಕ್ಕೆ ಸಾಮರ್ಥ್ಯ (೨) ಪ್ರಕೃತಿಯ ವಾತಾವರಣಕ್ಕೆ ತಕ್ಕಂತೆ ನೀರಿನ ವಿವಿಧ ಭೌತಿಕ ಸ್ಥಿತಿಯನ್ನು ಹೋಲಿಸಿದರೆ ತೃಪ್ತಿಕರ ಸಾಧನೆಯಲ್ಲಿ ವ್ಯತ್ಯಾಸವು ಕಂಡುಬಂದಿಲ್ಲ. ಆದ್ದರಿಂದ ಸಂಶೋಧನಾ ಪೂರ್ವಸಿದ್ಧಾಂತವು ಸಾಮರ್ಥ್ಯ ೨ಕ್ಕೆ ಅನ್ವಹಿಸಿದಂತೆ ಸ್ವೀಕೃತವಾಗಿದೆ. ಇದರ ಅರ್ಥ ನಗರ ಪ್ರದೇಶದ ಯಾವುದೇ ಬಾಲಕ, ಬಾಲಕಿಯರ ಸಾಮರ್ಥ್ಯ ೨ನ್ನು ಹೊರತುಪಡಿಸಿ ಇನ್ನುಳಿದ ಸಾಮರ್ಥ್ಯಗಳ ಸಾಧನೆಯಲ್ಲಿ ಗಣನೀಯ ವ್ಯತ್ಯಾಸವಿರುವುದಿಲ್ಲ.

**ಕೋಷ್ಟಕ : ೧೯**

ಗ್ರಾಮೀಣ ಪ್ರದೇಶದ ಶಾಲೆಗಳಲ್ಲಿ ಓದುತ್ತಿರುವ ಬಾಲಕ-ಬಾಲಕಿಯರು ಪರಿಸರ ಅಧ್ಯಯನ (ವಿಜ್ಞಾನ) ವಿಷಯದಲ್ಲಿ ಅಳವಡಿಸಿದ ಪ್ರತಿ ಹಾಗೂ ಎಲ್ಲಾ ಸಾಮರ್ಥ್ಯಗಳ ಸಾಧನೆಯಲ್ಲಿ ಗಣನೀಯ ವ್ಯತ್ಯಾಸವಿದೆ.

| **ಸಾಮರ್ಥ್ಯ** | **ಗ್ರಾಮೀಣ ಪ್ರದೇಶದ ಮಕ್ಕಳ ಸಾಧನೆಯ ಭಾಗ** | | | | |
|---|---|---|---|---|---|
| | **ಗಂಡು** (ಸಂಖ್ಯೆ=೧೯೬೦) | **ಹೆಣ್ಣು** (ಸಂಖ್ಯೆ=೮೪೦) | $P_1$-$P_2$ | $S_{P1-P2}$ | **Z-ಬೆಲೆ** |
| ೧ | ೦.೩೯ | ೦.೧೦ | ೦.೨೮೯ | ೦.೦೫೪೬ | ೫.೨೮ |
| ೨ | ೦.೪೩ | ೦.೦೭ | ೦.೩೫೮೩ | ೦.೦೫೪೮ | ೬.೫೩ |
| ೩ | ೦.೪೧ | ೦.೦೮ | ೦.೩೯೮ | ೦.೦೫೭೨ | ೬.೯೬ |
| ೪ | ೦.೪೯ | ೦.೫೦ | ೦.೦೧೪೮ | ೦.೦೬೨೪ | ೦.೨೪ |
| ೫ | ೦.೪೬ | ೦.೩೮ | ೦.೦೮೩ | ೦.೦೬೨ | ೧.೯೮ |
| ೬ | ೦.೩೫ | ೦.೩೩ | ೦.೦೨೬೯ | ೦.೫೯೨ | ೦.೪೫ |
| ೭ | ೦.೪೨ | ೦.೪೩ | ೦.೦೧೦೨ | ೦.೬೧೬ | ೦.೧೭ |
| ೮ | ೦.೩೪ | ೦.೨೪ | ೦.೦೯೬ | ೦.೫೭ | ೧.೬೮ |
| ೯ | ೦.೪೫ | ೦.೩೭ | ೦.೦೮೪ | ೦.೬೨ | ೧.೩೬ |
| ೧೦ | ೦.೪೦ | ೦.೪೦ | ೦.೦೧೮೮ | ೦.೦೪೧೩೨ | ೦.೨೫ |
| ಎಲ್ಲವುಗಳಲ್ಲಿ | ೦ (೦೦) | ೦ (೦೦) | ೦ (೦೦) | ೦ (೦೦) | ೦ (೦೦) |

* ೦.೦೫ ತೃಪ್ತಿಕರ ಸಾಧನೆಯ ಮಟ್ಟ.

** ೦.೦೧ ತೃಪ್ತಿಕರ ಸಾಧನೆಯ ಮಟ್ಟ.

ಕೋಷ್ಟಕ ೧೯ರಲ್ಲಿ ಪ್ರಸ್ತುತ ಪಡಿಸಿರುವಂತೆ ಮೇಲಿನ ಕೋಷ್ಟಕದಲ್ಲಿರುವ ಜಿ-ಬೆಲೆಯು ೦.೦೫ ತೃಪ್ತಿಕರ ಸಾಧನೆಯ ಮಟ್ಟಕ್ಕೆ ಈ ಕೆಳಗಿನ ಸಾಮರ್ಥ್ಯಗಳನ್ನು ಹೊರತುಪಡಿಸಿ ಮಕ್ಕಳ ಸಾಧನೆಯ ಭಾಗದಲ್ಲಿ ಯಾವುದೇ ಗಣನೀಯ ವ್ಯತ್ಯಾಸವಿರುವುದಿಲ್ಲ.

* ಸಸ್ಯ ಸಂಪತ್ತಿನ ಉಪಯೋಗ ಮತ್ತು ಅವುಗಳ ಕಾರ್ಯಗಳನ್ನು ಗೊತ್ತುಪಡಿಸುವುದು (೧)
* ಪ್ರಕೃತಿಯ ವಾತಾವರಣಕ್ಕೆ ತಕ್ಕಂತೆ ನೀರಿನ ವಿವಿಧ ಭೌತಿಕ ಸ್ಥಿತಿಯನ್ನು ತಿಳಿಸುವುದು.(೨)
* ಪ್ರಕೃತಿಯಲ್ಲಿರುವ ವಿವಿಧ ಬಗೆಯ ವಸ್ತುಗಳು ಅವುಗಳ ಭೌತಿಕ ಸ್ಥಿತಿಗಳ ಬಗ್ಗೆ ಜ್ಞಾನವನ್ನು ಮೂಡಿಸುವುದು.(೩)
* ಪ್ರಾಣಿ ಉತ್ಪನ್ನ ಮತ್ತು ಸಸ್ಯ ಉತ್ಪನ್ನವಾಗಿ ವಿಂಗಡಿಸುವುದು.(೪)

ಆದ್ದರಿಂದ ೧, ೨, ೩, ೫ ಸಾಮರ್ಥ್ಯಗಳನ್ನು ಹೊರತುಪಡಿಸಿದರೆ ಪೂರ್ವಸಿದ್ಧಾಂತವು ಸ್ವೀಕೃತವಾಗಿದೆ.

**ಪೂರ್ವಸಿದ್ಧಾಂತ ೧೦ :** ಸರ್ಕಾರಿ ಮತ್ತು ಖಾಸಗಿ ಶಾಲೆಗಳಲ್ಲಿ ಪರಿಸರ ಅಧ್ಯಯನ (ವಿಜ್ಞಾನ) ವಿಷಯವನ್ನು ಬೋಧಿಸುವ ಶಿಕ್ಷಕರು ಪ್ರತಿ ಹಾಗೂ ಎಲ್ಲಾ ಸಾಮರ್ಥ್ಯಗಳ ಸಾಧನೆಯಲ್ಲಿ ನಿರ್ದಿಷ್ಟವಾದ ವ್ಯತ್ಯಾಸವಿರುವುದಿಲ್ಲ.

**ಕೋಷ್ಟಕ : ೨೦**

ನಗರ ಪ್ರದೇಶದ ಸರ್ಕಾರಿ ಹಾಗೂ ಖಾಸಗಿ ಶಾಲೆಗಳಲ್ಲಿ ಪರಿಸರ ಅಧ್ಯಯನ (ವಿಜ್ಞಾನ) ವಿಷಯವನ್ನು ಬೋಧಿಸುವ ಶಿಕ್ಷಕರು ಪ್ರತಿ ಹಾಗೂ ಎಲ್ಲಾ ಸಾಮರ್ಥ್ಯಗಳ ಸಾಧನೆಯಲ್ಲಿ ಗಣನೀಯ ವ್ಯತ್ಯಾಸವಿದೆ.

| **ಸಾಮರ್ಥ್ಯ** | **ನಗರ ಪ್ರದೇಶದ ಶಿಕ್ಷಕರ ಸಾಧನೆಯ ಭಾಗ** | | | | |
|---|---|---|---|---|---|
| | **ಸರ್ಕಾರಿ** (ಸಂಖ್ಯೆ=೩೨) | **ಖಾಸಗಿ** (ಸಂಖ್ಯೆ=೦೮) | $P_1$-$P_2$ | $S_{P1-P2}$ | **Z-ಬೆಲೆ** |
| ೧ | ೦.೧೦ | ೦.೦೯ | ೦.೦೧ | ೦.೦೩೫ | ೦.೨೬ |
| ೨ | ೦.೧೮ | ೦.೧೬ | ೦.೦೨ | ೦.೦೪೯ | ೦.೦೧ |
| ೩ | ೦.೫೦ | ೦.೪೮ | ೦.೦೨ | ೦.೦೬೭ | ೦.೪೭ |
| ೪ | ೦.೭೦ | ೦.೬೮ | ೦.೦೨ | ೦.೦೬೨ | ೨.೦೪* |
| ೫ | ೦.೬೫ | ೦.೬೦ | ೦.೦೫ | ೦.೦೬೫ | ೧.೫೮ |
| ೬ | ೦.೪೦ | ೦.೩೮ | ೦.೦೨ | ೦.೦೫೮ | ೦.೭೧ |
| ೭ | ೦.೩೫ | ೦.೩೦ | ೦.೦೫ | ೦.೦೫೬ | ೦.೨೧ |
| ೮ | ೦.೨೭ | ೦.೧೮ | ೦.೦೯ | ೦.೦೫೨ | ೦.೮೯ |
| ೯ | ೦.೨೫ | ೦.೨೦ | ೦.೦೫ | ೦.೦೫೦ | ೨.೧೮* |
| ೧೦ | ೦.೨೬ | ೦.೨೪ | ೦.೦೨ | ೦.೦೫೬ | ೦.೪೦ |
| ಎಲ್ಲವುಗಳಲ್ಲಿ | ೦(೦೦) | ೦(೦೦) | ೦(೦೦) | ೦(೦೦) | ೦(೦೦) |

* ೦.೦೫ ತೃಪ್ತಿಕರ ಸಾಧನೆಯ ಮಟ್ಟ.

ಕೋಷ್ಟಕ ೨೦ರಲ್ಲಿ ಪ್ರಸ್ತುತ ಪಡಿಸಿರುವಂತೆ ಜಿ-ಬೆಲೆಯು ಈ ಕೆಳಗಿನ ಸಾಮರ್ಥ್ಯಗಳನ್ನು ಹೊರತು ಪಡಿಸಿದರೆ ೦.೦೫ ತೃಪ್ತಿಕರ ಸಾಧನೆಯ ಮಟ್ಟಕ್ಕೆ ಯಾವುದೇ ಗಣನೀಯ ವ್ಯತ್ಯಾಸಗಳಿರುವುದಿಲ್ಲ.

* ವಿವಿಧ ವಸ್ತುಗಳ ರುಚಿಗಳನ್ನು ಗೊತ್ತುಮಾಡುವುದು.(೧)
* ವಿವಿಧ ಬಗೆಯ ತರಕಾರಿಗಳ ಅವಶ್ಯಕತೆ ಹಾಗೂ ಅವುಗಳ ಸಂಸ್ಕರಣೆ ಬಗ್ಗೆ ಜ್ಞಾನವನ್ನು ಮೂಡಿಸುವುದು.(೨)

ಆದ್ದರಿಂದ ಸಾಮರ್ಥ್ಯ ೪ ಮತ್ತು ೯ನ್ನು ಹೊರತು ಪಡಿಸಿದರೆ ಇನ್ನುಳಿದ ೮ ಸಾಮರ್ಥ್ಯಗಳಿಗೆ ಈ ಪೂರ್ವಸಿದ್ಧಾಂತವು ಸ್ವೀಕೃತವಾಗಿದೆ.

**ಕೋಷ್ಟಕ : ೨೧**

ಗ್ರಾಮೀಣ ಪ್ರದೇಶದ ಸರಕಾರಿ ಮತ್ತು ಖಾಸಗಿ ಶಾಲೆಗಳಲ್ಲಿ ಪರಿಸರ ಅಧ್ಯಯನ (ವಿಜ್ಞಾನ) ವಿಷಯವನ್ನು ಬೋಧಿಸುವ ಶಿಕ್ಷಕರು ಪ್ರತಿ ಹಾಗೂ ಎಲ್ಲಾ ಸಾಮರ್ಥ್ಯಗಳ ಸಾಧನೆಯಲ್ಲಿ ಗಣನೀಯ ವ್ಯತ್ಯಾಸವಿದೆ.

| **ಸಾಮರ್ಥ್ಯ** | **ಗ್ರಾಮೀಣ ಶಾಲೆಗಳ ಶಿಕ್ಷಕರ ಸಾಧನೆಯ ಭಾಗ** | | | | |
|---|---|---|---|---|---|
| | **ಸರ್ಕಾರಿ** (ಸಂಖ್ಯೆ=೧೨೮) | **ಖಾಸಗಿ** (ಸಂಖ್ಯೆ=೩೨) | $P_1$-$P_2$ | $S_{P1-P2}$ | **Z-ಬೆಲೆ** |
| ೧ | ೦.೧೫ | ೦.೧೫ | ೦.೦೨ | ೦.೦೧೮ | ೦.೮೧ |
| ೨ | ೦.೧೭ | ೦.೧೬ | ೦.೦೧ | ೦.೪೧ | ೦೧.೯೧* |
| ೩ | ೦.೧೮ | ೦.೧೯ | ೦.೦೧ | ೦.೬೫ | ೦.೯೪ |
| ೪ | ೦.೬೦ | ೦.೫೮ | ೦.೦೨ | ೦.೬೪ | ೧.೪೦* |
| ೫ | ೦.೫೫ | ೦.೫೩ | ೦.೦೨ | ೦.೯೧ | ೦.೮೬ |
| ೬ | ೦.೪೦ | ೦.೩೭ | ೦.೦೩ | ೦.೬೫ | ೧.೨೭* |
| ೭ | ೦.೩೯ | ೦.೪೦ | ೦.೦೧ | ೦.೬೪ | ೦.೭೭ |
| ೮ | ೦.೪೪ | ೦.೪೦ | ೦.೦೪ | ೦.೫೧ | ೦.೩೬ |
| ೯ | ೦.೩೧ | ೦.೨೯ | ೦.೦೨ | ೦.೫೫ | ೨.೨೫ |
| ೧೦ | ೦.೨೮ | ೦.೨೫ | ೦.೦೩ | ೦.೦೦೬ | ೧.೧೦* |
| ಎಲ್ಲವುಗಳಲ್ಲಿ | ೦ (೦೦) | ೦ (೦೦) | ೦ (೦೦) | ೦ (೦೦) | ೦ (೦೦) |

* ೦.೦೫ ತೃಪ್ತಿಕರ ಸಾಧನೆಯ ಮಟ್ಟ.

ಕೋಷ್ಟಕ ೨೧ರಲ್ಲಿ ಪ್ರಸ್ತುತ ಪಡಿಸಿರುವಂತೆ ಜಿ-ಬೆಲೆಯು ಈ ಕೆಳಗಿನ ಸಾಮರ್ಥ್ಯಗಳನ್ನು ಹೊರತುಪಡಿಸಿದರೆ ೦.೦೫ ತೃಪ್ತಿಕರ ಸಾಧನೆಯ ಮಟ್ಟಕ್ಕೆ ಗಣನೀಯ ವ್ಯತ್ಯಾಸವಿರುವುದು ಕಂಡುಬಂದಿದೆ.

* ಪ್ರಕೃತಿಯ ವಾತಾವರಣಕ್ಕೆ ತಕ್ಕಂತೆ ನೀರಿನ ವಿವಿಧ ಭೌತಿಕ ಸ್ಥಿತಿಗಳನ್ನು ತಿಳಿಸುವುದು (೨)

* ವಸ್ತುಗಳ ವಿವಿಧ ಬಗೆಯ ರುಚಿಗಳನ್ನು ಗೊತ್ತು ಪಡಿಸುವುದು. (೪)

* ನೀರಿನಲ್ಲಿ ಉದುಗಿರುವ ವಿವಿಧ ಕಶ್ಮಲಗಳನ್ನು ಬೇರ್ಪಡಿಸುವ ವಿಧಾನಗಳ ಬಗ್ಗೆ ಜ್ಞಾನವನ್ನು ಮೂಡಿಸುವುದು (೬)

* ನಮ್ಮ ದೇಹದಲ್ಲಿರುವ ವಿವಿಧ ಅಂಗಗಳನ್ನು ಪರಿಚಯಿಸುವುದು ಹಾಗೂ ಅವುಗಳ ಕಾರ್ಯದ ಬಗ್ಗೆ ಅರಿವು ಮೂಡಿಸುವುದು. (೧೦)

ಸಾಮರ್ಥ್ಯಗಳು ೨, ೪, ೬, ೧೦ಗಳು ೦.೦೫ ತೃಪ್ತಿಕರ ಮಟ್ಟಕ್ಕೆ ಗಣನೀಯ ವ್ಯತ್ಯಾಸವಿರುವುದು ಕಂಡುಬಂದಿದೆ. ಆದ್ದರಿಂದ ಈ ಮೇಲಿನ ಸಂಶೋಧನಾ ಸಿದ್ಧಾಂತವನ್ನು ತಿರಸ್ಕೃತಗೊಳಿಸಲಾಗಿದೆ. ಆದರೆ ಸಂಶೋಧನಾ ಪೂರ್ವ ಸಿದ್ಧಾಂತವನ್ನು ಇನ್ನುಳಿದ ಪ್ರತಿ ಹಾಗೂ ಎಲ್ಲಾ ಸಾಮರ್ಥ್ಯಗಳ ಸಾಧನೆಯಲ್ಲಿ ಸ್ವೀಕೃತವಾಗಿದೆ. ಆದ್ದರಿಂದ ೨, ೪, ೬ ಮತ್ತು ೧೦ ಸಾಮರ್ಥ್ಯಗಳನ್ನು ಗ್ರಾಮೀಣ ಸರ್ಕಾರಿ ಶಾಲೆಗಳಲ್ಲಿ ಬೋಧಿಸುವ ಶಿಕ್ಷಕರು, ಖಾಸಗಿ ಶಾಲೆಗಳ ಶಿಕ್ಷಕರಿಗಿಂತ ಗಣನೀಯ ಸಾಧನೆ ಮಾಡಿರುತ್ತಾರೆ.

## ಸಮುದಾಯ ಮತ್ತು ಶಾಲೆ

ನಾಡಿನ ಪ್ರತಿ ಮಗುವೂ ಸುಶಿಕ್ಷಿತನಾಗಬೇಕೆಂಬ ಸದಾಶಯದಿಂದ, ಸರ್ಕಾರ ಪ್ರತಿ ಮಗುವಿಗೂ ಎಟುಕುವಂತೆ ಎಲ್ಲಾ ಹಳ್ಳಿಗಳಲ್ಲಿ ಶಾಲೆಗಳನ್ನು ತೆರೆದು ಶಿಕ್ಷಣ ದೊರಕಿಸುವ ಕಾಯಕದಲ್ಲಿ ತೊಡಗಿದೆ.

ಶಿಕ್ಷಕರ, ಪೋಷಕರ ಹಾಗೂ ಸಮುದಾಯದ ಸಂಘಟಿತ ಪ್ರಯತ್ನದಿಂದ ಮಾತ್ರ ಶಾಲೆಯಲ್ಲಿ ಶೈಕ್ಷಣಿಕ ವಾತಾವರಣ ಸೃಷ್ಟಿಯಾಗಿ ವಿದ್ಯಾರ್ಥಿಗಳಿಗೆ ಗುಣಮಟ್ಟದ ಶಿಕ್ಷಣ ನೀಡಲು ಸಾಧ್ಯವಾಗುತ್ತದೆ. ವೀಕ್ಷಿಸಿದ ಮಾಹಿತಿಯ ಅನ್ವಯ ಸಮುದಾಯದ ಪಾಲ್ಗೊಳ್ಳುವಿಕೆ ಕೇವಲ ನೆಪಮಾತ್ರಕ್ಕೆ ಇದ್ದು ಶಾಲೆಯ ಪ್ರತಿಷ್ಠಿತರು ಎಲ್ಲಾ ಕಾರ್ಯಗಳನ್ನು ನಿರ್ವಹಿಸುತ್ತಿದ್ದಾರೆ. ಇಡೀ ಸಮುದಾಯವೇ ಶಾಲೆಯನ್ನು ತಮ್ಮದೆಂದು ಭಾವಿಸಿ ಅದರ ಅಭಿವೃದ್ಧಿಗೆ ಶ್ರಮಿಸಬೇಕು. ಈ ದೃಷ್ಟಿಯಿಂದ ಶಾಲಾ ಅಭಿವೃದ್ಧಿ ಸಮಿತಿ ಹಾಗೂ ಗ್ರಾಮಶಿಕ್ಷಣ ಸಮಿತಿಗಳು ರಚನೆಗೊಂಡಿವೆ.

ಈ ಸಮಿತಿಗಳಲ್ಲಿ ಪೋಷಕರಿಗೆ ಹಾಗೂ ಸಮಿತಿಯ ಸದಸ್ಯರಿಗೆ ಜವಾಬ್ದಾರಿಯನ್ನು ಹೇರಲಾಗಿದೆಯೇ ಹೊರತು ಅಧಿಕಾರ ಚಲಾಯಿಸಲು ಅವಕಾಶವಿಲ್ಲವೆಂಬುದು ತಿಳಿದುಬಂದಿದೆ. ಇದನ್ನು ಗಮನಿಸಿದ ಸರ್ಕಾರ ಪ್ರತಿ ಶಾಲೆಯಲ್ಲಿ ಶಾಲಾ ಅಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿ ರಚಿಸಿ, ಕರ್ತವ್ಯಗಳ ಜೊತೆಗೆ ಕೆಲವು ದತ್ತ ಜವಾಬ್ದಾರಿಗಳನ್ನು ನೀಡಿದೆ.

ಪರಿವೀಕ್ಷಣೆ ಮಾಡಿದ ಎಲ್ಲಾ ಶಾಲೆಗಳಲ್ಲೂ ಶಾಲಾ ಅಭಿವೃದ್ಧಿ ಹಾಗೂ ಮೇಲುಸ್ತುವಾರು ಸಮಿತಿ ರಚನೆಯಾಗಿದೆ. ಸದಸ್ಯರುಗಳಿಗೆ ಸಭೆಯ ರಚನೆ, ಕರ್ತವ್ಯಗಳು, ಶಿಕ್ಷಣ ವ್ಯವಸ್ಥೆ, ಸರ್ಕಾರದ ಯೋಜನೆಗಳು ಹಾಗೂ ಕಾರ್ಯಕ್ರಮಗಳು ಹೀಗೆ ಮುಂತಾವುಗಳ ಬಗ್ಗೆ ವಿವರಣಾತ್ಮಕ ಕ್ರಿಯಾ ಚಟುವಟಿಕೆಗಳನ್ನು ಕಾರ್ಯರೂಪಕ್ಕೆ ತರಬೇಕಾದದ್ದು ಅನಿವಾರ್ಯ ವಾಗಿದೆ. ಕೇವಲ ಒಂದು ಅಥವಾ ಎರಡು ದಿನಗಳ ತರಬೇತಿ ಮಾಡಿದರೆ ಸಾಲದು, ಕಾಲಾನುಕ್ರಮ ಬದಲಾವಣೆ ಹಾಗೂ ಬೆಳವಣಿಗೆಗೆ ಅನುಗುಣವಾಗಿ ನಿರಂತರ ತರಬೇತಿಗಳು ನಡೆಯಬೇಕು. ಸಮುದಾಯದ ಪಾಲ್ಗೊಳ್ಳುವಿಕೆಯ ಕ್ರಿಯಾತ್ಮಕ ಚಟುವಟಿಕೆಗಳು ಈ ಕೆಳಗಿನ ಅಂಶಗಳನ್ನು ಒಳಗೊಂಡಿರಬೇಕು.

* ಸಮುದಾಯದ ವಿವಿಧ ಸ್ಥರಗಳ ಸದಸ್ಯರಿಗೆ ಶಾಲಾ ಅಭಿವೃದ್ಧಿಯಲ್ಲಿ ಮುಕ್ತ ಅವಕಾಶ ನೀಡಬೇಕು.
* ಇವರಿಗೆ ತರಬೇತಿ ನೀಡುವ ಸಮಯದಲ್ಲಿ ತಾಳ್ಮೆ ಮತ್ತು ಜಾಣ್ಮೆಯಿಂದ ವರ್ತಿಸುವುದು ಉತ್ತಮ ಸಂಬಂಧಗಳನ್ನು ಗಟ್ಟಿ ಮಾಡುತ್ತದೆ.
* ಸದಸ್ಯರಿಗೆ ಶಿಕ್ಷಣದ ಬಗ್ಗೆ ಏನೂ ಗೊತ್ತಿಲ್ಲವೆಂಬ ನಕಾರಾತ್ಮಕ ಭಾವನೆ ಬೇಡ, ಅವರಿಗಿರುವ ಅನುಭವ, ಎದುರುಸುತ್ತಿರುವ ಸವಾಲುಗಳು, ಸಮಸ್ಯೆಗಳ ಪರಿಹಾರೋಪಾಯಗಳನ್ನು ತಿಳಿಸಿ ಉತ್ತೇಜಿಸಬೇಕು.
* ಸದಸ್ಯರೊಡನೆ ಶಿಕ್ಷಕರು ಸ್ನೇಹದಿಂದ ವರ್ತಿಸಬೇಕು.
* ಶಾಲಾ ಅಭಿವೃದ್ಧಿ ಮತ್ತು ಮೇಲುಸ್ತುವಾರಿ ಕೆಲಸಕ್ಕೆ ಅಗತ್ಯ ಮಾನಸಿಕ ಸಿದ್ಧತೆ ಹಾಗೂ ಕೌಶಲಗಳಿಗೆ ಬಗ್ಗೆ ಸ್ಫೂರ್ತಿ ನೀಡಲು ಸಹಾಯಕವಾಗಬೇಕು.
* ಸದಸ್ಯರ ಬಹುಮತದ ತೀರ್ಮಾನವೇ ಅಂತಿಮ ತೀರ್ಮಾನವಾಗಬೇಕು.

* ಎಲ್ಲಾ ಸದಸ್ಯರು ಸಕ್ರಿಯವಾಗಿ ಪಾಲ್ಗೊಳ್ಳಲು ಮುಕ್ತ ಅವಕಾಶವಿರಬೇಕು.

* ಪ್ರತಿ ಸದಸ್ಯರ ಸಲಹೆಸೂಚನೆಗಳನ್ನು ಕ್ರೋಢೀಕರಿಸಿ ಚರ್ಚೆಗಾಗಿ ಸದಸ್ಯರಿಗೆ ತೀರ್ಮಾನಿಸಲು ಅವಕಾಶವಿರಬೇಕು.

* ಸಮುದಾಯದ ಹಂಚಿಕೆಗೆ ಅನುಗುಣವಾಗಿ ಕಾಲಕಾಲಕ್ಕೆ ತರಬೇತಿ ನಡೆಸಬೇಕು.

* ತರಬೇತಿಯು ನಮ್ಮ ಶಾಲೆಯ ಒಳಿತಿಗಾಗಿ ಹಾಗೂ ನಮ್ಮ ಮಕ್ಕಳ ಅಭಿವೃದ್ಧಿಗಾಗಿ ಎಂಬ ಭಾವನಾತ್ಮಕ ಸಂಬಂಧ ಸದಸ್ಯರಲ್ಲಿ ಬೆಳೆಯುವಂತಿರಬೇಕು.

* ಸದಸ್ಯರುಗಳ ನಡುವೆ ಯಾವುದೇ ರೀತಿಯ ಅಸಮಾನತೆ ಉಂಟಾಗದಂತೆ ಎಚ್ಚರವಹಿಸುವುದು ಸೂಕ್ತ.

# ಅಧ್ಯಾಯ - ೫

# ಉಪಸಂಹಾರ

೫. ೧ ಅಧ್ಯಯನದ ಮುಖ್ಯಾಂಶಗಳು

೫. ೨ ಫಲಿತಾಂಶಗಳ ವಿಮರ್ಶೆ

೫. ೩ ಅಧ್ಯಯನದ ಫಲಿತ

೫. ೪ ಪ್ರಸ್ತುತ ಅಧ್ಯಯನದಲ್ಲಿ ಶಿಕ್ಷಣದ ಅಳವಡಿಕೆಗಳು

೫. ೫ ಸಲಹೆಗಳು

೫. ೬ ಮುಂದಿನ ಅಧ್ಯಯನದ ಸಾಧ್ಯತೆಗಳು

# ಉಪಸಂಹಾರ

ಪ್ರಸ್ತುತ ಅಧ್ಯಯನವು ಬೇಡ ಸಮುದಾಯದ ಮಕ್ಕಳು ಪರಿಸರ ಅಧ್ಯಯನದ (ವಿಜ್ಞಾನ) ವಿಷಯದಲ್ಲಿ ಕಲಿಕಾ ಕನಿಷ್ಠ ಹಂತಗಳ ಸಾಧನೆಯನ್ನು ಕುರಿತಾದ ಸಂಶೋಧನೆಯಾಗಿದೆ. ಇದು ಪ್ರಾಥಮಿಕ ಶಾಲೆಯ ಕೊನೆಯ ಹಂತವಾದ ನಾಲ್ಕನೇ ತರಗತಿಯನ್ನು ಆಯ್ದುಕೊಳ್ಳಲಾಗಿದ್ದು, ಸಮುದಾಯವನ್ನು ಕೇವಲ ಒಂದು ಗುಂಪು ಎಂದು ಪರಿಗಣಿಸದೆ ಉಪಗುಂಪುಗಳಾಗಿ ಈ ಕೆಳಗಿನಂತೆ ವಿಂಗಡಿಸಲಾಗಿದೆ. ಅವು ಯಾವುವೆಂದರೆ ಲಿಂಗ, ವಾಸಸ್ಥಳ ಮತ್ತು ಶಾಲೆಯಾಗಿದೆ. ಮಕ್ಕಳು ಮತ್ತು ಬೋಧಕ ವರ್ಗವನ್ನು ವ್ಯವಸ್ಥಿತ ರೀತಿಯಲ್ಲಿ ಮೇಲಿನಂತೆ ವಿಂಗಡಣೆ ಮಾಡಲಾಗಿದೆ. ಅವರ ಸಾಧನೆಯಲ್ಲಿರುವ ಪ್ರಮುಖ ಅಂಶಗಳನ್ನು ಸಂಬೋಧನೆ ಒಳಗೊಂಡಿದೆ. ಅಧ್ಯಯನಕ್ಕೆ ಒಳಪಟ್ಟ ಪ್ರತಿಗುಂಪುಗಳ ಸಾಧನೆಯಲ್ಲಿ ವ್ಯತ್ಯಾಸಗಳನ್ನು ಪ್ರತಿ ಶಾಲೆಯ ಕಲಿಕಾ ಕನಿಷ್ಠ ಹಂತಗಳ ಸಾಧನೆಯ ಆಧಾರದ ಮೇಲೆ ಗೊತ್ತುಪಡಿಸಲಾಗಿದೆ.

### ೫. ೧. ಅಧ್ಯಯನದ ಮುಖ್ಯಾಂಶಗಳು

೦೧. ಗ್ರಾಮೀಣ ಮತ್ತು ನಗರ ಶಾಲೆಗಳೆರಡೂ ಪ್ರತಿ ಹಾಗೂ ಎಲ್ಲಾ ಸಾಮರ್ಥ್ಯಗಳ ತೃಪ್ತಿಕರ ಸಾಧನೆಯನ್ನು ಸಾಧಿಸುವಲ್ಲಿ ವಿಫಲವಾಗಿವೆ. ಈ ಶಾಲೆಗಳ ಯಾವ ಒಂದು ಮಗುವೂ ಕೂಡ ಶೇಕಡ ೮೦ಕ್ಕಿಂತ ಹೆಚ್ಚು ಸಾಮರ್ಥ್ಯಗಳ ಸಾಧನೆಯನ್ನು ಸಾಧಿಸಿರುವುದು ಕಂಡುಬಂದಿಲ್ಲ. ಪ್ರತಿ ಸಾಮರ್ಥ್ಯಗಳ ಶೇಕಡ ಸಾಧನೆಯ ಭಾಗವು ೧೮ ರಿಂದ ೬೧ರಷ್ಟು ಗ್ರಾಮೀಣ ಭಾಗದಲ್ಲಿ ಕಂಡು ಬಂದರೆ, ೨೬ ರಿಂದ ೭೩ರಷ್ಟು ನಗರ ಪ್ರದೇಶದಲ್ಲಿ ಕಂಡುಬಂದಿದೆ. ಗ್ರಾಮೀಣ ಪ್ರದೇಶದ ಯಾವ ಒಂದು ಮಗುವೂ ಕೂಡ ೧೦ ರಲ್ಲಿಯ ೩ ಸಾಮರ್ಥ್ಯಗಳನ್ನು ಸಾಧಿಸಿರುವುದು ಕಂಡುಬಂದಿಲ್ಲ.

೦೨. ಗ್ರಾಮೀಣ ಮತ್ತು ನಗರ ಶಾಲೆಗಳಲ್ಲಿ ಪರಿಸರ ಅಧ್ಯಯನ (ವಿಜ್ಞಾನ) ವಿಷಯವನ್ನು ಬೋಧಿಸುವ ಶಿಕ್ಷಕರು ಪ್ರತಿ ಹಾಗೂ ಎಲ್ಲಾ ಸಾಮರ್ಥ್ಯಗಳ ತೃಪ್ತಿಕರ ಸಾಧನೆಯನ್ನು ಸಾಧಿಸಿರುವುದಿಲ್ಲ. ಈ ಎರಡೂ ಬಗೆಯ ಶಾಲೆಗಳಲ್ಲಿ ಬೋಧಿಸುವ ಯಾವ ಒಬ್ಬ ಶಿಕ್ಷಕರೂ ಶೇಕಡ ೪೦ಕ್ಕಿಂತ ಹೆಚ್ಚು

ಸಾಮರ್ಥ್ಯಗಳ ಸಾಧನೆಯನ್ನು ಸಾಧಿಸಿರುವುದು ಕಂಡು ಬಂದಿರುವುದಿಲ್ಲ. ಗ್ರಾಮೀಣ ಭಾಗದ ಬೋಧಕರ ಪ್ರತಿ ಸಾಮರ್ಥ್ಯಗಳ ಶೇಕಡ ಸಾಧನೆಯು ೧೬ ರಿಂದ ೬೧ರಷ್ಟು ಆಗಿದ್ದರೆ, ನಗರ ಪ್ರದೇಶದ ಶಾಲೆಗಳಲ್ಲಿ ಬೋಧಿಸುವ ಶಿಕ್ಷಕರ ಈ ಸಾಧನೆಯು ಶೇಕಡ ೨೩ ರಿಂದ ೫೯ ಆಗಿರುತ್ತದೆ. ಇಲ್ಲಿ ಗ್ರಾಮೀಣ ಪ್ರದೇಶದ ಶಾಲೆಗಳಲ್ಲಿ ಬೋಧಿಸುವ ಶಿಕ್ಷಕರ ಗರಿಷ್ಠ ಶೇಕಡ ಸಾಧನೆಯು ಹೆಚ್ಚು ಪರಿಣಾಮಕಾರಿಯಾಗಿರುವುದು ಗಮನಿಸುವ ಅಂಶವಾಗಿದೆ.

೦೩. ನಗರ ಪ್ರದೇಶದ ಸರ್ಕಾರಿ ಮತ್ತು ಖಾಸಗಿ ಶಾಲೆಯ ಯಾವ ಮಗುವೂ ಕೂಡ ಕಲಿಕಾ ಕನಿಷ್ಠ ಹಂತಗಳ ಎಲ್ಲಾ ಸಾಮರ್ಥ್ಯಗಳ ಸಾಧನೆಯನ್ನು ಸಾಧಿಸುವಲ್ಲಿ ವಿಫಲವಾಗಿದೆ. ಸರ್ಕಾರಿ ಶಾಲೆಯ ಶೇಕಡ ಸಾಧನೆಯು ೧೬ ರಿಂದ ೭೦ರಷ್ಟಾಗಿದ್ದರೆ, ಖಾಸಗಿ ಶಾಲೆಗಳ ಸಾಧನೆಯು ಶೇಕಡ ೧೯ ರಿಂದ ೬೩ರಷ್ಟಾಗಿರುವುದು ಕಂಡುಬಂದಿದೆ. ಈ ವರ್ಗದ ಸರ್ಕಾರಿ ಶಾಲೆಗಳ ಮಕ್ಕಳ ಕೆಲವು ಸಾಮರ್ಥ್ಯಗಳ ಶೇಕಡ ಸಾಧನೆಯು, ಖಾಸಗಿ ಶಾಲೆಗಳ ಮಕ್ಕಳು ಶೇಕಡ ಸಾಧನೆಗಿಂತ ಉತ್ತಮವಾಗಿರುವುದು ಕಂಡುಬಂದಿದೆ. ಎಲ್ಲಾ ನಗರ ಪ್ರದೇಶದ ಸರ್ಕಾರಿ ಮತ್ತು ಖಾಸಗಿ ಶಾಲೆಯ ಯಾವ ಒಂದು ಮಗುವೂ ಕಲಿಕಾ ಕನಿಷ್ಠ ಹಂತಗಳಲ್ಲಿಯ ಪ್ರತಿ ಹಾಗೂ ಎಲ್ಲಾ ಸಾಮರ್ಥ್ಯಗಳ ತೃಪ್ತಿಕರ ಸಾಧನೆಗೈಯುವಲ್ಲಿ ವಿಫಲರಾಗಿರುವುದು ಇಲ್ಲಿ ಗಮನಿಸುವ ಅಂಶವಾಗಿದೆ.

೦೪. ನಗರ ಪ್ರದೇಶದ ಸರ್ಕಾರಿ ಮತ್ತು ಖಾಸಗಿ ಶಾಲೆಗಳಲ್ಲಿ ಬೋಧಿಸುವ ಯಾವ ಶಿಕ್ಷಕರು ಕಲಿಕಾ ಕನಿಷ್ಠ ಹಂತಗಳ ಎಲ್ಲಾ ಸಾಮರ್ಥ್ಯಗಳ ಸಾಧನೆ ಮಾಡುವಲ್ಲಿ ವಿಫಲರಾಗಿದ್ದಾರೆ. ಸರ್ಕಾರಿ ಶಾಲೆಗಳ ಶಿಕ್ಷಕರ ಸಾಮರ್ಥ್ಯಗಳ ಶೇಕಡ ಸಾಧನೆಯು ೧೦ ರಿಂದ ೭೦ರಷ್ಟು ಆಗಿದ್ದರೆ, ಖಾಸಗಿ ಶಾಲೆಗಳ ಬೋಧಕರ ಸಾಮರ್ಥ್ಯಗಳ ಶೇಕಡ ಸಾಧನೆಯು ೦೯ ರಿಂದ ೬೮ರಷ್ಟು ಆಗಿರುವುದು ಕಂಡುಬಂದಿದೆ. ಖಾಸಗಿ ಶಾಲೆಗಳ ಬೋಧಕರು ಯಾವ ತರಬೇತಿ ಪಡೆಯದಿದ್ದರೂ ಪರಿಸರ ಅಧ್ಯಯನ (ವಿಜ್ಞಾನ) ವಿಷಯದಲ್ಲಿಯ ಸಾಮರ್ಥ್ಯಗಳನ್ನು ಅಳವಡಿಸಿಕೊಳ್ಳುವಲ್ಲಿಯ ಗರಿಷ್ಠ ಸಾಧನೆಯು ಶೇಕಡ ೬೮ರಷ್ಟು ಉತ್ತಮ ಸಾಧನೆಯಾಗಿರುವುದು ಕಂಡುಬಂದಿದೆ. ಆದರೆ ನಗರ ಪ್ರದೇಶದ ಯಾವ ಬಗೆಯ ಶಾಲೆಯಾಗಿರಲಿ ಬೋಧಕ ವರ್ಗವು ಕಲಿಕಾ ಕನಿಷ್ಠ ಹಂತಗಳಲ್ಲಿಯ ಎಲ್ಲಾ ಸಾಮರ್ಥ್ಯಗಳ ತೃಪ್ತಿಕರ ಸಾಧನೆಯಲ್ಲಿ ವಿಫಲರಾಗಿರುವುದು ಇಲ್ಲಿ ಗಮನಿಸಬೇಕಾದ ಅಂಶವಾಗಿದೆ.

೦೫. ಗ್ರಾಮೀಣ ಪ್ರದೇಶದ ಸರ್ಕಾರಿ ಮತ್ತು ಖಾಸಗಿ ಶಾಲೆಗಳಲ್ಲಿ ಓದುತ್ತಿರುವ ಬೇಡ ಸಮುದಾಯದ ಮಕ್ಕಳು ಪರಿಸರ ಅಧ್ಯಯನ (ವಿಜ್ಞಾನ) ವಿಷಯದಲ್ಲಿಯ ಎಲ್ಲ ಸಾಮರ್ಥ್ಯಗಳ ಸಾಧನೆಯನ್ನು (ಕಲಿಕಾ ಕನಿಷ್ಠ ಹಂತಗಳು) ಸಾಧಿಸುವಲ್ಲಿ ವಿಫಲರಾಗಿರುತ್ತಾರೆ. ಈ ಪ್ರದೇಶದ ಸರ್ಕಾರಿ ಶಾಲೆಗಳ ಶೇಕಡ ಸಾಧನೆಯು ೦೯ ರಿಂದ ೫೯ರಷ್ಟು ಆಗಿದ್ದು, ಖಾಸಗಿ ಶಾಲೆಗಳ ಸಾಧನೆಯು ಶೇಕಡ ೧೧ ರಿಂದ ೪೯ರಷ್ಟು ಆಗಿದೆ. ಗ್ರಾಮೀಣ ಪ್ರದೇಶದ ಸರ್ಕಾರಿ ಶಾಲೆಗಳು ಕೆಲವು ಸಾಮರ್ಥ್ಯಗಳ ಸಾಧನೆಯು ಗ್ರಾಮೀಣ ಖಾಸಗಿ ಶಾಲೆಗಳಿಂತ ಉತ್ತಮವಾಗಿರುವುದು ಕಂಡು ಬಂದಿದೆ. ಅದರಲ್ಲಿಯೂ ವಸತಿ ಶಾಲೆಗಳಲ್ಲಿ ಅತಿ ಉತ್ತಮ ಸಾಧನೆ ಕಂಡುಬಂದಿದೆ. ಆದರೆ ಗ್ರಾಮೀಣ ಸರ್ಕಾರಿ ಮತ್ತು ಖಾಸಗಿ ಶಾಲೆಯ ಯಾವ ಒಂದು ಮಗುವಾದರೂ ಕಲಿಕಾ ಕನಿಷ್ಠ ಹಂತಗಳ ಗಣನೀಯ ಸಾಧನೆಯನ್ನು ಮಾಡುವಲ್ಲಿ ವಿಫಲರಾಗಿರುವುದು ಕಂಡುಬಂದಿದೆ.

೦೬. ಗ್ರಾಮೀಣ ಪ್ರದೇಶದ ಸರ್ಕಾರಿ ಮತ್ತು ಖಾಸಗಿ ಶಾಲೆಗಳಲ್ಲಿ ಬೋಧಿಸುವ ಶಿಕ್ಷಕರು ಕಲಿಕಾ ಕನಿಷ್ಠ ಹಂತಗಳಲ್ಲಿಯ ಎಲ್ಲ ಸಾಮರ್ಥ್ಯಗಳ ತೃಪ್ತಿಕರ ಸಾಧನೆಯನ್ನು ಮಾಡುವಲ್ಲಿ ವಿಫಲರಾಗಿರುತ್ತಾರೆ. ಸರ್ಕಾರಿ ಶಾಲೆಗಳ ಬೋಧಕರ ಶೇಕಡ ಸಾಧನೆಯು ೧೫ ರಿಂದ ೫೫ ರಷ್ಟಾಗಿದ್ದರೆ ಖಾಸಗಿ ಶಾಲೆಗಳಲ್ಲಿ ಬೋಧಿಸುವ ಶಿಕ್ಷಕರ ಶೇಕಡ ಸಾಧನೆಯು ೧೫ ರಿಂದ ೫೩ ಆಗಿರುವುದು ಕಂಡುಬಂದಿದೆ. ಸರ್ಕಾರಿ ಹಾಗೂ ಖಾಸಗಿ ಶಾಲೆಗಳ ಬೋಧಕರ ಶೇಕಡ ಸಾಧನೆಯು ಸರಿಸಮಾನವಾಗಿದ್ದರೂ, ಖಾಸಗಿ ಶಾಲೆಗಳ ಸಾಧನೆಯು ಉತ್ತಮವಾಗಿರುವುದು ಗಮನಿಸುವ ಅಂಶವಾಗಿದೆ. ಬೋಧಕ ವರ್ಗದ ಯಾವುದೇ ಶಿಕ್ಷಕರು ಕಲಿಕಾ ಕನಿಷ್ಠ ಹಂತಗಳ ತೃಪ್ತಿಕರ ಸಾಧನೆ ಗೈಯುವಲ್ಲಿ ವಿಫಲರಾಗಿರುವುದು ಕಂಡುಬಂದಿದೆ.

೦೭. ಗ್ರಾಮೀಣ ಶಾಲೆಗಳ ಗಂಡು ಮತ್ತು ಹೆಣ್ಣು ಮಕ್ಕಳು ಪರಿಸರ ಅಧ್ಯಯನ (ವಿಜ್ಞಾನ) ವಿಷಯದಲ್ಲಿರುವ ಪ್ರತಿ ಹಾಗೂ ಎಲ್ಲಾ ಸಾಮರ್ಥ್ಯಗಳ ಸಾಧನೆಯಲ್ಲಿ ಗಣನೀಯ ವ್ಯತ್ಯಾಸವಿಲ್ಲದಿರುವುದು ಕಂಡುಬಂದಿದೆ. ಆದರೆ ಕೇವಲ ನಾಲ್ಕು ಸಾಮರ್ಥ್ಯಗಳ ಸಾಧನೆಯಲ್ಲಿ ಈ ಮಕ್ಕಳ ವರ್ಗದಲ್ಲಿ ಗಣನೀಯ ವ್ಯತ್ಯಾಸವಿರುವುದು ಕಂಡುಬಂದಿದೆ.

೦೮. ನಗರ ಭಾಗದ ಗಂಡು ಮತ್ತು ಹೆಣ್ಣು ಮಕ್ಕಳು ಕೇವಲ ಒಂದು ಸಾಮರ್ಥ್ಯದ ಗಣನೀಯ ಸಾಧನೆಯನ್ನು ಸಾಧಿಸಿರುತ್ತಾರೆ. ಒಂದು ಗಂಡು ಮಗು ಕೂಡ ಎಲ್ಲಾ ಸಾಮರ್ಥ್ಯಗಳ ಸಾಧನೆ ಮಾಡಲು

ವಿಫಲನಾಗಿರುತ್ತಾನೆ. ಆದರೆ ಯಾವ ಒಂದು ಹೆಣ್ಣು ಮಗುವೂ ೮ ಸಾಮರ್ಥ್ಯಗಳ (೪೦ ಶೇಕಡ) ಸಾಧನೆ ಮಾಡುವಲ್ಲಿ ವಿಫಲಳಾಗಿರುವುದು ಕಂಡಬಂದಿದೆ. ಈ ಅಂಶದ ಆಧಾರದ ಮೇಲೆ ಕಲಿಕಾ ಕನಿಷ್ಠ ಹಂತಗಳ ಸಾಧನೆಯಲ್ಲಿ ಗ್ರಾಮೀಣ ಪ್ರದೇಶದ ಹೆಣ್ಣುಮಕ್ಕಳು ನಗರ ಪ್ರದೇಶದ ಹೆಣ್ಣುಮಕ್ಕಳಿಗಿಂತ ಉತ್ತಮ ಸಾಧಕರಾಗಿರುತ್ತಾರೆ. ಈ ಅಂಶವು ಗ್ರಾಮೀಣ ಗಂಡು ಮಕ್ಕಳು ಮತ್ತು ನಗರ ಗಂಡು ಮಕ್ಕಳಿಗೆ ತದ್ವಿರುದ್ಧವಾಗಿದೆ.

೦೯. ಈ ಕೆಳಗಿನ ಎಲ್ಲಾ ಹೋಲಿಕೆಗಳು, ಸಾಮರ್ಥ್ಯಗಳ ಗಣನೀಯ ಸಾಧನೆಯ ಭಾಗದಲ್ಲಿರುವ ವ್ಯತ್ಯಾಸಗಳನ್ನು ಪರೀಕ್ಷಿಸುವುದಾಗಿದೆ.

೧. ಎರಡು ಸಾಮರ್ಥ್ಯಗಳನ್ನು ನಗರ ಶಾಲೆಗಳು ಗ್ರಾಮೀಣ ಶಾಲೆಗಳಿಗಿಂತ ಉತ್ತಮ ಸಾಧನೆ ಮಾಡಿರುತ್ತಾರೆ. ಅದೇ ರೀತಿ ಒಂದು ಸಾಮರ್ಥ್ಯವನ್ನು ಗ್ರಾಮೀಣ ಶಾಲೆಗಳು ನಗರ ಶಾಲೆಗಳಿಗಿಂತ ಉತ್ತಮ ಸಾಧನೆ ಮಾಡಿರುತ್ತಾರೆ.

೨. ಎರಡು ಸಾಮರ್ಥ್ಯಗಳನ್ನು ನಗರ ಸರ್ಕಾರಿ ಶಾಲೆಗಳು, ನಗರ ಖಾಸಗಿ ಶಾಲೆಗಳ ಸಾಧನೆಗಿಂತ ಉತ್ತಮ ಸಾಧನೆ ಮಾಡಿರುತ್ತಾರೆ. ಆದರೆ ಒಂದು ಸಾಮರ್ಥ್ಯವನ್ನು ನಗರ ಖಾಸಗಿ ಶಾಲೆಗಳು, ನಗರ ಸರ್ಕಾರಿ ಶಾಲೆಗಳಿಗಿಂತ ಉತ್ತಮ ಸಾಧನೆ ಮಾಡಿರುತ್ತಾರೆ.

೩. ನಾಲ್ಕು ಸಾಮರ್ಥ್ಯಗಳನ್ನು ಗ್ರಾಮೀಣ ಗಂಡುಮಕ್ಕಳು ಗ್ರಾಮೀಣ ಹೆಣ್ಣುಮಕ್ಕಳಿಗಿಂತ ಉತ್ತಮ ಸಾಧನೆ ಮಾಡಿರುವುದು ಕಂಡುಬಂದಿದೆ.

೪. ಒಂದು ಸಾಮರ್ಥ್ಯವನ್ನು ನಗರ ಸರ್ಕಾರಿ ಶಾಲೆಯ ಗಂಡು ಮಗುವು ನಗರ ಸರ್ಕಾರಿ ಶಾಲೆಯ ಹೆಣ್ಣುಮಗುವಿಗಿಂತ ಉತ್ತಮ ಸಾಧನೆ ಮಾಡಿರುತ್ತಾನೆ.

೫. ಒಂದು ಸಾಮರ್ಥ್ಯವನ್ನು ನಗರ ಶಿಕ್ಷಕರು ಗ್ರಾಮೀಣ ಶಿಕ್ಷಕರಿಗಿಂತ ಉತ್ತಮ ಸಾಧನೆಗೈದರೆ, ಗ್ರಾಮೀಣ ಶಿಕ್ಷಕರು ೩ ಸಾಮರ್ಥ್ಯಗಳಲ್ಲಿ ನಗರ ಶಿಕ್ಷಕರ ಸಾಧನೆಗಿಂತ ಮೇಲು ಗೈ ಸಾಧಿಸಿದ್ದಾರೆ.

೬. ಎರಡು ಸಾಮರ್ಥ್ಯಗಳನ್ನು ಗ್ರಾಮೀಣ ಪ್ರದೇಶದ ಸರ್ಕಾರಿ ಶಾಲೆಯ ಶಿಕ್ಷಕರು, ಖಾಸಗಿ ಶಾಲೆಯ ಶಿಕ್ಷಕರಿಗಿಂತ ಉತ್ತಮ ಸಾಧನೆಗೈದರೆ, ಒಂದು ಸಾಮರ್ಥ್ಯದ ಸಾಧನೆಯಲ್ಲಿ ಖಾಸಗಿ ಶಾಲೆಯ ಶಿಕ್ಷಕರು ಉತ್ತಮ ಸಾಧನೆಗೈದಿರುವುದು ಕಂಡುಬಂದಿದೆ.

೭. ಆರು ಸಾಮರ್ಥ್ಯಗಳನ್ನು ನಗರ ಸರ್ಕಾರಿ ಶಾಲೆಯ ಬೋಧಕರು, ಖಾಸಗಿ ಶಾಲೆಗಳ ಬೋಧಕರ ಸಾಧನೆಗಿಂತ ಉತ್ತಮ ಸಾಧನೆ ಮಾಡಿರುವುದು ಕಂಡುಬಂದಿದೆ. ಆದರೆ ನಗರ ಪ್ರದೇಶದ ಖಾಸಗಿ ಶಾಲೆಯ ಶಿಕ್ಷಕರ ಒಂದು ಸಾಮರ್ಥ್ಯದ ಸಾಧನೆಯು ಸರ್ಕಾರಿ ಶಾಲೆಗಿಂತ ಉತ್ತಮವಾಗಿರುವುದು ಗಮನಿಸುವ ಅಂಶವಾಗಿದೆ.

**೫. ೨. ಫಲಿತಾಂಶಗಳ ವಿಮರ್ಶೆ**

ಪ್ರಸ್ತುತ ಅಧ್ಯಯನವು ಈ ಮೊದಲೇ ಅಧ್ಯಾಯ ೧ರಲ್ಲಿ ತಿಳಿಸಿರುವಂತೆ ''ಬಳ್ಳಾರಿ ಜಿಲ್ಲೆಯ ಬೇಡ ಸಮುದಾಯದ ಶಿಕ್ಷಣದ ಪ್ರಗತಿ : ಒಂದು ಅಧ್ಯಯನ'' (ಜಿಲ್ಲಾ ಪ್ರಾಥಮಿಕ ಶಿಕ್ಷಣ ಯೋಜನೆ ಅಡಿಯಲ್ಲಿ) ಇದು ಕಲಿಕಾ ಕನಿಷ್ಠ ಹಂತಗಳ ಸಾಧನೆಯನ್ನು ಚರಾಂಕ (Variables)ಗಳಾದ ವಾಸಸ್ಥಳ, ಲಿಂಗ ಮತ್ತು ಸಂಸ್ಥೆ ಅಂಶಗಳ ಮೇಲೆ ಪರೀಕ್ಷಿಸಲಾಗಿದ್ದು, ಇವುಗಳ ಫಲಿತಾಂಶಗಳ ವಿಮರ್ಶನೆಯನ್ನು ಈ ಕೆಳಗೆ ವಿವರಿಸಲಾಗಿದೆ.

ನಗರ ಮತ್ತು ಗ್ರಾಮೀಣ ಶಾಲೆಗಳ ಮೇಲೆ ರೂಪಿಸಲಾದ ಪೂರ್ವಸಿದ್ಧಾಂತವನ್ನು ಪ್ರತಿ ಹಾಗೂ ಎಲ್ಲಾ ಸಾಮರ್ಥ್ಯಗಳ ಸಾಧನೆಯಿಂದ ತಿರಸ್ಕೃತವಾಗಿದೆ. ನಗರ ಪ್ರದೇಶದ ಕಲಿಕಾ ಕನಿಷ್ಠ ಹಂತಗಳ ಸಾಧನೆಯ ನಿರ್ವಹಣೆ ಗ್ರಾಮೀಣ ಪ್ರದೇಶದ ಶಾಲೆಗಳಿಗಿಂತ ಉತ್ತಮವಾಗಿರುವುದು ಕಂಡುಬಂದಿದೆ. ಆದಾಗ್ಯೂ ಈ ಎರಡು ಬಗೆಯ ಶಾಲೆಗಳು ಕಲಿಕಾ ಕನಿಷ್ಠ ಹಂತಗಳ ತೃಪ್ತಿಕರ ಸಾಧನೆಯ ಮಟ್ಟಕ್ಕಿಂತ ಬಹಳ ಕೆಳಮಟ್ಟದಲ್ಲಿವೆ. ಅಂದರೆ ಈ ಶಾಲೆಗಳ ಯಾವ ಮಗುವೂ ಶೇಕಡ ೮೦ರಷ್ಟಕ್ಕಿಂತ ಹೆಚ್ಚು ಸಾಮರ್ಥ್ಯಗಳ ಸಾಧನೆ ಮಾಡಿಲ್ಲವಾದರೂ ಪರಿಸರ ಅಧ್ಯಯನದ (ವಿಜ್ಞಾನ) ವಿಷಯದ ಕೆಲವು ಸಾಮರ್ಥ್ಯಗಳನ್ನು ಬೋಧಿಸುವಲ್ಲಿ ಶಿಕ್ಷಕರು ನಿರ್ಲಕ್ಷೆ ಮಾಡಿದ್ದಾರೆ. ಬೋಧಕರು ಇನ್ನೂ ಅನೇಕ ಸಾಮರ್ಥ್ಯಗಳ ಪರಿಪೂರ್ಣ ತಿಳುವಳಿಕೆ ಮಾಡಿಸಬೇಕಾಗಿದೆ. ಯಾವುದೇ ಒಬ್ಬ ಗ್ರಾಮೀಣ ವಿದ್ಯಾರ್ಥಿ ಶೇಕಡ ೨೫ರಷ್ಟು ಸಾಮರ್ಥ್ಯಗಳನ್ನು ಸಾಧಿಸುವಲ್ಲಿ ವಿಫಲವಾದರೆ, ಬೋಧಕರ ಈ ಸಾಧನೆಯ ಮಟ್ಟ ಇನ್ನೂ ಸುಧಾರಿಸಬೇಕಾಗಿದೆ. ಈ ಭಾಗದ ಗರಿಷ್ಠ ಶೇಕಡ ಸಾಧನೆಯು ೬೧ರಷ್ಟು ಇರುವುದು ಸಾಮರ್ಥ್ಯಗಳ ಕೆಳಮಟ್ಟದ ಸಾಧನೆಯನ್ನು ಪ್ರತಿಬಿಂಬಿಸುತ್ತದೆ. ಇದಕ್ಕೆ ಮಕ್ಕಳು ಶಾಲೆಗೆ ಬಂದ ಹಿನ್ನೆಲೆ, ಶಾಲೆಯಲ್ಲಿ ಪ್ರಸ್ತುತವಿರುವ ವ್ಯವಸ್ಥೆ ಹಾಗೂ ಶಿಕ್ಷಕರ ಸಾಮರ್ಥ್ಯಗಳ ಸಾಧನೆ ಕಾರಣವಾಗಿದೆ. ಆದ್ದರಿಂದ ಗ್ರಾಮೀಣ ಪ್ರದೇಶದ ಶಾಲೆಗಳಲ್ಲಿ ಓದುವ ಮಕ್ಕಳು ಹಾಗೂ ಬೋಧಿಸುವ ಶಿಕ್ಷಕರು ನಗರ ಪ್ರದೇಶದಲ್ಲಿಯ ಶಾಲೆಗಳ ಅನುಕೂಲತೆಗಳಿಂದ ವಂಚಿತರಾಗಿದ್ದಾರೆ.

**೧. ಆಡಳಿತ :** ಖಾಸಗಿ ಶಾಲೆಗಳು ಸರ್ಕಾರಿ ಶಾಲೆಗಳಿಗಿಂತ ಉತ್ತಮ ಶಿಕ್ಷಣ ನೀಡುತ್ತವೆ ಎಂಬುದು ಸಾಮಾನ್ಯ ಹೇಳಿಕೆಯಾಗಿದೆ. ಪ್ರಸ್ತುತ ಅಧ್ಯಯನವು ಮೇಲಿನ ಅಂಶಕ್ಕೆ ವಿರುದ್ಧ ರೀತಿಯಲ್ಲಿ ಫಲಿತಾಂಶಗಳನ್ನು ಒದಗಿಸಿದೆ. ಸರ್ಕಾರಿ ಶಾಲೆಗಳ ಶೇಕಡ ಸಾಧನೆಯು ಬಹಳ ಉತ್ತಮವಾಗಿದೆ. ಕೆಲವು ಸಾಮರ್ಥ್ಯಗಳ ಸಾಧನೆಯು ಕೆಳಮಟ್ಟದಿದ್ದರೂ ಖಾಸಗಿ ಶಾಲೆಗಳಷ್ಟು ಕಳಪೆ ಸಾಧನೆಗಿಂತ ಉತ್ತಮವಾಗಿದೆ. ಸರ್ಕಾರಿ ಮತ್ತು ಖಾಸಗಿ ಶಾಲೆಗಳ ಸಾಧನೆಯಲ್ಲಿಯ ವ್ಯತ್ಯಾಸಗಳ ಅಂತರವು ಬಹಳ ಸಮೀಪವಿದೆ. ಒಟ್ಟಾರೆ ಹೇಳುವುದಾದರೆ ಯಾವ ಒಬ್ಬರೂ ಕೂಡ ಪರಿಸರ ಅಧ್ಯಯನ (ವಿಜ್ಞಾನ) ವಿಷಯದಲ್ಲಿ ಅಳವಡಿಸಿದ ಎಲ್ಲಾ ಸಾಮರ್ಥ್ಯಗಳ ಗಣನೀಯ ಸಾಧನೆ ಮಾಡುವಲ್ಲಿ ವಿಫಲರಾಗಿದ್ದಾರೆ.

**೨. ಲಿಂಗ :** ಕನಿಷ್ಠ ಕಲಿಕಾ ಹಂತಗಳ ಸಾಧನೆಯಲ್ಲಿ ನಗರ ಪ್ರದೇಶದ ಗಂಡು ಮತ್ತು ಹೆಣ್ಣುಮಕ್ಕಳು ಗ್ರಾಮೀಣ ಪ್ರದೇಶದ ಗಂಡು ಮತ್ತು ಹೆಣ್ಣು ಮಕ್ಕಳಿಗಿಂತ ಉತ್ತಮ ಸಾಧನೆ ಮಾಡಿರುತ್ತಾರೆ. ಇವರಿಬ್ಬರಲ್ಲಿ ನಗರ ಪ್ರದೇಶದ ಹೆಣ್ಣುಮಕ್ಕಳು, ನಗರ ಪ್ರದೇಶದ ಗಂಡು ಮಕ್ಕಳಿಗಿಂತ ಹಿಂದುಳಿದಿದ್ದಾರೆ. ಆದರೆ ಗ್ರಾಮೀಣ ಪ್ರದೇಶದ ಗಂಡು ಮಕ್ಕಳು ನಗರ ಪ್ರದೇಶದ ಗಂಡು ಮಕ್ಕಳ ಸಾಧನೆಗಿಂತ ಉತ್ತಮ ಸಾಧನೆ ಮಾಡಿರುತ್ತಾರೆ.

ಪರಿಸರ ಅಧ್ಯಯನ (ವಿಜ್ಞಾನ) ವಿಷಯ ಬೋಧಿಸುವ ಶಿಕ್ಷಕಿ ಮತ್ತು ಶಿಕ್ಷಕರ ನಡುವಿನ ಸಾಧನೆಯಲ್ಲಿ ಅಪಾರ ವ್ಯತ್ಯಾಸವಿರುತ್ತದೆ. ನಗರದ ಶಿಕ್ಷಕರ ಸಾಧನೆಯು ನಗರದ ಶಿಕ್ಷಕಿಯರ ಸಾಧನೆಗಿಂತ ಉತ್ತಮವಾಗಿದೆ. ಗ್ರಾಮೀಣ ಶಿಕ್ಷಕರ ಸಾಧನೆಯು ನಗರ ಶಿಕ್ಷಕರ ಸಾಧನೆಗಿಂತ ಮೇಲುಗೈ ಸಾಧಿಸಿದೆ. ಗ್ರಾಮೀಣ ಶಿಕ್ಷಕಿಯರ ಸಾಧನೆ ಬಹಳ ಕೆಳಮಟ್ಟದ್ದಾಗಿದ್ದು, ನಗರ ಪ್ರದೇಶದ ಖಾಸಗಿ ಶಾಲೆಗಳ ಪ್ರಗತಿಗಿಂತ ಉತ್ತಮವಾಗಿದೆ.

**೩. ಅತಿ ಹೆಚ್ಚು ಸಾಧನೆಯ ಸಾಮರ್ಥ್ಯಗಳು, ಅತಿ ಕಡಿಮೆ ಸಾಧನೆಯ ಸಾಮರ್ಥ್ಯಗಳು :** ಪ್ರಸ್ತುತ ಅಧ್ಯಯನದಲ್ಲಿ ಕಲಿಕಾ ಕನಿಷ್ಠ ಹಂತಗಳಿಂದ ಪರಿಸರ ಅಧ್ಯಯನಕ್ಕೆ ಸಂಬಂಧಿಸಿದ ೧೦ ಸಾಮರ್ಥ್ಯಗಳನ್ನು ತೆಗದುಕೊಂಡಿದ್ದು, ಈ ಸಾಮರ್ಥ್ಯಗಳ ಸಾಧನೆಯನ್ನು ಕೆಲವು ಶಾಲೆಗಳು ಮಾಡಿದರೆ, ಇನ್ನು ಕೆಲವು ಶಾಲೆಗಳು ಸಾಧಿಸಲಾಗಿರುವುದಿಲ್ಲ ಅಥವಾ ಅಲಕ್ಷಿಸಲಾಗಿದೆ. ವಿವಿಧ ಶಾಲೆಗಳ ಉತ್ತಮ ಸಾಧನೆಯ ಸಾಮರ್ಥ್ಯಗಳು ಈ ಕೆಳಗಿನಂತಿವೆ.

* ವಸ್ತುಗಳ ವಿವಿಧ ಬಗೆಯ ರುಚಿಗಳನ್ನು ಗೊತ್ತುಪಡಿಸುವುದು. (೪)
* ಸಸ್ಯ ಸಂಪತ್ತಿನ ಉಪಯೋಗ ಮತ್ತು ಅವುಗಳ ಕಾರ್ಯಗಳನ್ನು ಗೊತ್ತುಪಡಿಸುವುದು. (೧)
* ಪ್ರಕೃತಿಯಲ್ಲಿರುವ ವಿವಿಧ ಬಗೆಯ ವಸ್ತುಗಳು ಮತ್ತು ಅವುಗಳ ಭೌತಿಕ ಸ್ಥಿತಿಗಳ ಬಗ್ಗೆ ಜ್ಞಾನವನ್ನು ಮೂಡಿಸುವುದು. (೩)

*  ಪ್ರಾಣಿ ಉತ್ಪನ್ನ ಮತ್ತು ಸಸ್ಯ ಉತ್ಪನ್ನವಾಗಿ ವಿಂಗಡಿಸುವುದು. (೫)

*  ನೀರಿನಲ್ಲಿ ಉದುಗಿರುವ ವಿವಿಧ ಕಶ್ಮಲಗಳನ್ನು ಬೇರ್ಪಡಿಸುವ ವಿಧಾನಗಳ ಬಗ್ಗೆ ಜ್ಞಾನವನ್ನು ಮೂಡಿಸುವುದು. (೬)

**ಅತಿ ಕಡಿಮೆ ಸಾಧನೆ ಮಾಡಿದ ಸಾಮರ್ಥ್ಯಗಳು**

*  ಸಮತೋಲನ ಆಹಾರ ಮತ್ತು ಆರೋಗ್ಯದ ಅವಶ್ಯಕತೆಯ ಬಗ್ಗೆ ಅರ್ಥೈಸುವುದು. (೮)

*  ನಮ್ಮ ದೇಹದಲ್ಲಿರುವ ವಿವಿಧ ಅಂಗಗಳನ್ನು ಪರಿಚಯಿಸುವುದು ಮತ್ತು ಅವುಗಳ ಕಾರ್ಯದ ಬಗ್ಗೆ ಅರಿವು ಮೂಡಿಸುವುದು. (೧೦)

**೫. ೩. ಅಧ್ಯಯನದ ಫಲಿತ**

೦೧. ಪ್ರಸ್ತುತ ಅಧ್ಯಯನವು ಅಪೇಕ್ಷಿಸಿದ ಕಲಿಕಾ ಕನಿಷ್ಠ ಹಂತಗಳ ಸಾಧನೆಯ ಮಟ್ಟವನ್ನು ಶೇಕಡ ೮೦ರಷ್ಟು ಸಾಮರ್ಥ್ಯಗಳನ್ನು ಹಾಗೂ ಶೇಕಡ ೮೦ರಷ್ಟು ಮಕ್ಕಳು ಈಡೇರಿಸುವ ಗುರಿ ಇಟ್ಟುಕೊಂಡಿತ್ತು. ಅದಾಗ್ಯೂ ವಿವಿಧ ಬಗೆಯ ಶಾಲೆಗಳು ಅನೇಕ ವೈವಿಧ್ಯಗಳನ್ನು ಪ್ರದರ್ಶಿಸಿದರೂ ಯಾವ ಶಾಲೆಯೂ ಅಪೇಕ್ಷಿಸಿದ ಮಟ್ಟ ತಲುಪಲು ಸಾಧ್ಯವಾಗಿಲ್ಲ. ಇದರ ಅರ್ಥ ಶಾಲೆ ಯಾವ ಬಗೆಯದ್ದಾಗಿದ್ದರೂ ಪ್ರಾಥಮಿಕ ಶಿಕ್ಷಣ ಮುಗಿಸುತ್ತಿರುವ ಮಗುವು ಶೇಕಡ ೮೦ರಷ್ಟು ಸಾಮರ್ಥ್ಯಗಳ ಸಾಧನೆ ಮಾಡದೆ ಪೂರ್ಣಗೊಳಿಸುತ್ತಿದೆ. ಪರಿಸರ ಅಧ್ಯಯನ (ವಿಜ್ಞಾನ) ವಿಷಯದಲ್ಲಿ ಅಳವಡಿಸಿದ ಕಲಿಕಾ ಕನಿಷ್ಠ ಹಂತಗಳ ಸಾಮರ್ಥ್ಯಗಳನ್ನು ಶೇಕಡ ೮೦ರಷ್ಟನ್ನು ಯಾವ ಶಾಲೆಯೂ ಈಡೇರಿಸದಿರುವುದು ಪ್ರಸ್ತುತ ಶಾಲಾ ವ್ಯವಸ್ಥೆಯ ಸತ್ಯ ಸಂಗತಿಯಾಗಿದೆ. ಈ ಪರಿಸ್ಥಿತಿ ಗ್ರಾಮೀಣ ಪ್ರದೇಶಗಳ ಶಾಲೆಗಳಲ್ಲಿ ಇನ್ನೂ ಹದೆಗೆಟ್ಟಿದೆ. ಹಾಗೂ ಎಲ್ಲಾ ಮಕ್ಕಳು (೯೦ರಷ್ಟು) ಗರಿಷ್ಟ ಸಾಮರ್ಥ್ಯಗಳ ಸಾಧನೆ ಮಾಡುವಲ್ಲಿ ವಿಫಲರಾಗಿದ್ದಾರೆ. ಪ್ರಾಥಮಿಕ ಹಂತ ಪೂರ್ಣಗೊಳಿಸುವ ಗ್ರಾಮೀಣ ಪ್ರದೇಶದ ಮಗುವು ಕೊನೆಯ ಪಕ್ಷ ಪರಿಸರ ಅಧ್ಯಯನ (ವಿಜ್ಞಾನ) ತರಗತಿ ೨ ಮತ್ತು ೩ರಲ್ಲಿಯ ಕಲಿಕಾ ಕನಿಷ್ಠ ಹಂತಗಳ ಸಾಮರ್ಥ್ಯಗಳ ಸಾಧನೆ ಮಾಡುವುದು ಅವಶ್ಯಕವಾಗಿದೆ.

೦೨. ಮಕ್ಕಳ ಸಾಧನೆಯ ಗುಣಮಟ್ಟ ಹೀಗಾದರೆ, ಶಿಕ್ಷಕರಲ್ಲಿಯೂ ಈ ಸಾಧನೆ ಮಾಡದಿರುವುದು ಗಮನಿಸುವ ಅಂಶವಾಗಿದ್ದು, ಸರ್ಕಾರಿ ಶಾಲಾ ಶಿಕ್ಷಕರು ಕಾಲಕಾಲಕ್ಕೆ ಅನೇಕ ಬಗೆಯ ತರಬೇತಿಗಳನ್ನು

ಪಡೆದಿರುತ್ತಾರೆ. ಈ ತರಬೇತಿಗಳು ವಿಷಯವಾರು ನಡೆದಿದ್ದರೂ ಪರಿಸರ ಅಧ್ಯಯನದ ವಿಷಯ ಬೋಧಕರ ಸಾಧನೆಯು ತೃಪ್ತಿಕರ ಮಟ್ಟ ತಲುಪದಿರುವುದು ವಿಪರ್ಯಾಸದ ಸಂಗತಿಯಾಗಿದೆ. ಇದಕ್ಕೆ ಶಿಕ್ಷಕರ ವೃತ್ತಿಯ ಮೇಲಿನ ಆಸಕ್ತಿ, ಸಮಯದ ಅಭಾವ ವಿವಿಧ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳದಿರುವುದು, ನಿರ್ಲಕ್ಷ್ಯೆ, ಅಲ್ಲದೆ ತರಬೇತಿಗಳ ಪ್ರತಿಕ್ರಿಯೆಯನ್ನು ಪುನರ್‌ಪರಿಶೀಲಿಸಲು ಆಗಿಲ್ಲದಿರುವುದು ಈ ವಿಫಲತೆಗೆ ಕಾರಣವಾಗಿದೆ. ಇದು ಗ್ರಾಮೀಣ ಪ್ರದೇಶದ ಶಿಕ್ಷಕರಲ್ಲಿ ಹೆಚ್ಚು ಪ್ರಮಾಣದಲ್ಲಿರುತ್ತದೆ. ಅದರಲ್ಲಿಯೂ ಶಿಕ್ಷಕಿಯರ ತರಬೇತಿಗಳು ಬಹಳ ವಿರಳವಾಗಿದ್ದು, ಈ ವರ್ಗದ ಸಾಮರ್ಥ್ಯಗಳ ಸಾಧನೆಯು ಅತೀ ಕೆಳಮಟ್ಟದ್ದಾಗಿರುತ್ತದೆ. ಆದರೆ ಯಾವುದೇ ಪೂರಕ ತರಬೇತಿಗಳನ್ನು ಪಡೆಯದಿರುವ ನಗರದ ಖಾಸಗಿ ಶಾಲೆಯ ಶಿಕ್ಷಕರ ಬೋಧನಾ ಪ್ರಗತಿಯು ನಗರದ ಸರ್ಕಾರಿ ಶಾಲೆ ಶಿಕ್ಷಕರ ಸಾಮರ್ಥ್ಯಗಳ ಸಾಧನೆಗೆ ಅತಿ ಸಮೀಪವಿರುವುದು ಗಮನಿಸುವ ಅಂಶವಾಗಿದೆ.

೦೩. ಪ್ರಾಥಮಿಕ ಹಂತದಲ್ಲಿ ಪರಿಸರ ಅಧ್ಯಯನ (ವಿಜ್ಞಾನ) ವಿಷಯದ ಮೇಲಿನ ಕಲಿಕಾ ಕನಿಷ್ಠ ಹಂತಗಳ ಸಾಧನೆಯನ್ನು ಖಾತ್ರಿ ಮಾಡಿಕೊಳ್ಳಲು ಪ್ರಗತಿಗಾಗಿ ಅನೇಕ ಅವಶ್ಯಕತೆಗಳನ್ನು ಬೋಧಕ ವರ್ಗಕ್ಕೂ ಹಾಗೂ ಪ್ರಾಥಮಿಕ ಹಂತದ ಮಕ್ಕಳಿಗೂ ಫಲಪ್ರದವಾಗುವಂತೆ ನಿರ್ವಹಿಸಬೇಕಾಗಿದೆ.

## ೫. ೪. ಪ್ರಸ್ತುತ ಅಧ್ಯಯನದಲ್ಲಿ ಶಿಕ್ಷಣದ ಅಳವಡಿಕೆಗಳು

ಕನಿಷ್ಠ ಕಲಿಕಾ ಹಂತಗಳಲ್ಲಿ ಪರಿಸರ ಅಧ್ಯಯನ (ವಿಜ್ಞಾನ) ವಿಷಯದ ಮೇಲೆ ಪ್ರಕಟವಾದ ಸಾಮರ್ಥ್ಯಗಳ ಸಾಧನೆ ಮಾಡದಿರಲು ಅನೇಕ ಕಾರಣಗಳಿವೆ. ಅವುಗಳಲ್ಲಿ,

ಎ) ಶಿಕ್ಷಣದ ಚಟುವಟಿಕೆ ಮೂಲಕ ಸಾಮರ್ಥ್ಯಗಳ ಸಾಧನೆಯ ಬಗ್ಗೆ ಪ್ರಾಥಮಿಕ ಶಾಲಾ ಶಿಕ್ಷಕರಿಗೆ ಪರಿಜ್ಞಾನವಿಲ್ಲದಿರುವುದು.

ಬಿ) ಮೌಲ್ಯಮಾಪನ ಆಧಾರಿತ ವಿಷಯಗಳಲ್ಲಿ ಸಾಮಥ್ಯಗಳನ್ನು ಅಳವಡಿಸಿಕೊಳ್ಳದಿರುವುದು.

ಸಿ) ಕಲಿಕಾ ಕನಿಷ್ಠ ಹಂತಗಳ ಸಾಧನೆಗೆ ಹೆಚ್ಚುವರಿ ಪಠ್ಯಕ್ರಮದ ಅಳವಡಿಕೆ.

ಡಿ) ಅಸಮರ್ಪಕ ಪಠ್ಯಪುಸ್ತಕ.

ಈ ಮೇಲಿನ ಅಂಶಗಳಿಗೆ ಅವಲಂಬಿಸಿದ ಶೈಕ್ಷಣಿಕ ಅಳವಡಿಕೆಗಳನ್ನು ಕೆಳಗೆ ಪ್ರಸ್ತುತ ಪಡಿಸಲಾಗಿದೆ.

೧. ಕನಿಷ್ಠ ಕಲಿಕಾ ಹಂತಗಳನ್ನು ಪ್ರಾಥಮಿಕ ಶಾಲಾ ಶಿಕ್ಷಕರಿಗೆ ನೀಡುವ ಪೂರ್ವ ತರಬೇತಿ ಪಠ್ಯಕ್ರಮದಲ್ಲಿ ಅಳವಡಿಸಬೇಕು.

